"ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕ ವಿನ್ಯಸ್ತ ಗೃಹೀತೇರ್ದರ್ಶಯತಿ ಚ ಓಂ' ಈ ಅಧಿಕರಣಾರ್ಥವನ್ನು 'ಅವ್ಯಕ್ತ" ಶಬ್ದದಿಂದ ಸಂಗ್ರಹಿಸಿದ್ದಾರೆ

"ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ" ಈ ಅಧಿಕರಣಾರ್ಥವನ್ನು ಕರ್ಮವಾಕ್ಯೈಶ್ಚ' ಶಬ್ದಗಳಿಂದ ಸಂಗ್ರಹಿಸಿದ್ದಾರ

ಕರ್ಮಪ್ರತಿಪಾದಕ ವಾಕ್ಯಗಳಾದ "ಜ್ಯೋತಿಷಾಯಜೇತ್" ಇತ್ಯಾದಿ ವಾಕ್ಯಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆ ಅವನು ಒಬ್ಬನೇ ಆಗಿದ್ದರೂ ಅಪರಿಮಿತ ರೂಪಗಳುಳ್ಳವನಾಗಿದ್ದಾನೆ ಕಾರಣತ್ವೇನ' ಈ ಅಧಿಕರಣಾರ್ಥವನ್ನು 'ಅವಾಂತರಂ ಕಾರಣಂ ಚ' ಪದಗಳಿಂದ ಸಂಗ್ರಹಿಸಿದ್ದಾರ ವಿಷ್ಣುವು ಕಾರಣನೂ ಕಾರ್ಯನೂ ಆಗಿರುವನು

ಓಂ ಸಮಾಕರ್ಷಾತ್ ಓಂ ಈ ಅಧಿಕರಣಾರ್ಥವನ್ನು ಪ್ರತ್ಯೇಕವಾಗಿ ಹೇಳಿಲ್ಲ ಕಾರಣವೆಂದರೆ ಹಿಂದ ಹೇಳಿರುವ ಯುಕ್ತಿಗಳಿಂದ ಎಲ್ಲ ಶಬ್ದಗಳು ಬ್ರಹ್ಮ (ವಿಷ್ಣು) ವಾಚಕವೆಂದೂ ಹಾಗೆಯೇ ರೂಢಿ ಮೊದಲಾದವುಗಳಿಂದ ಇತರ ವಸ್ತುಗಳಲ್ಲಿ ಆ ಶಬ್ದಗಳ ವ್ಯವಹಾರವು ಸಿದ್ಧವಾದ ಮೇಲೆ ಬಾಧಕ ಪರಿಹಾರಕ್ಕೋಸ್ಕರ ಮಾತ್ರ ಈ ಸೂತ್ರ ಬಂದಿದೆ

ಓಂ ಪ್ರಕೃತಿಶ್ಚಪ್ರತಿಜ್ಞಾ ದೃಷ್ಟಾಂತಾನುಪರೋಧಾತ್ ಓಂ" ಈ ಅಧಿಕರಣಾರ್ಥವನ್ನು 'ಪ್ರಕೃತಿಶ್ಚ' ಪದದಿಂದ ತಿಳಿಸಿದ್ದಾರೆ ಪ್ರಕೃತಿ ಶಬ್ದದಿಂದ ಉಪಲಕ್ಷಿತವಾದ ಅಶೇಷ ಸ್ತ್ರೀವಾಚಕ ಶಬ್ದಗಳಿಂದ ವಿಷ್ಣುವು ವಾಚ್ಯನಾಗಿದ್ದಾನ

ಕೊನೆಯ ಅಧಿಕರಣಾರ್ಥವನ್ನು ಶೂನ್ಯಮೇವ ಚ" ಶಬ್ದದಿಂದ ಸಂಗ್ರಹಿಸಿದ್ದಾರ ನಿಷೇಧಾರ್ಥಕವಾದ ಎಲ್ಲ (ಅಶೇಷ) ಶಬ್ದಗಳಿಂದ ವಿಷ್ಣುವೇ ವಾಚ್ಯನು 'ಇತ್ಯಾದಿ' ಶಬ್ದದಿಂದ ಪಾದಾರ್ಥವನ್ನು ಉಪಸಂಹರಿಸುತ್ತಾರೆ ಅವ್ಯಕ್ತಾದಿ ಶಬ್ದಗಳಿಂದ ತದುಪಲಕ್ಷಿತವಾದ ಆಯಾ ಪ್ರಕರಣಗತ, ಆಯಾ ಸಮಾನನ್ಯಾಯಗಳಿಂದ ಶ್ರುತಿಲಿಂಗಾದಿಗಳಿಂದ ಅನ್ಯತ್ರ ಪ್ರಸಿದ್ಧವಾದ ನಾಮಗಳಿಂದ ಪರಮ ಮುಖ್ಯವೃತ್ತಿಯಿಂದ ಒಬ್ಬನೇ ವಿಷ್ಣುವು ವಾಚ್ಯನಾಗಿದ್ದಾನೆ ಪ್ರತಿಪಾದ್ಯನಾಗಿದ್ದಾನ ಅಥವಾ ಸ್ವಾತಂತ್ರ್ಯಾದಿ ಹೇತುಗಳಿಂದ ಸೂತ್ರಕಾರರಾದ ಶ್ರೀ ವೇದವ್ಯಾಸರಿಂದ ಎಲ್ಲ ಶಬ್ದಗಳಿಂದ ವಾಚ್ಯನಾಗಿದ್ದಾನೆಂದು ಪ್ರತಿಪಾದಿತನಾಗಿದ್ದಾನೆ

"ಅತೋಽನಂತಗುಣಃ" ಶಬ್ದಗಳಿಂದ ಅಧ್ಯಾಯಾರ್ಥವನ್ನು ಉಪಸಂಹಾರಮಾಡುತ್ತಾರೆ ಶಬ್ದಗಳು ಮಹಾಯೋಗಯುಕ್ತವಾಗಿವೆ ಅಂದರೆ ಅವಯವಾರ್ಥವನ್ನು ನೋಡಿದಾಗ ಎಲ್ಲ ಶಬ್ದಗಳು ಆಯಾ ಧರ್ಮಗಳಿಂದ, ಗುಣಗಳಿಂದ ವಿಷ್ಣುವನ್ನೇ ಬೋಧಿಸುತ್ತವೆ ಈ ಕಾರಣದಿಂದ ವಿಷ್ಣುವು ಅನಂತಗುಣ ಪರಿಪೂರ್ಣನೆಂದು ಸಿದ್ಧವಾಗುತ್ತದೆ

**ಅಣುಭಾಷ್ಯ ವಿವರಣೆಯಲ್ಲಿ**

**॥ ಪ್ರಥಮಾಧ್ಯಾಯದ ನಾಲ್ಕನೇ ಪಾದವು ಮುಗಿದುದು ॥**

॥ ಶ್ರೀಃ ॥

# ದ್ವಿತೀಯಾಧ್ಯಾಯಃ

ಶ್ರೌತಸ್ಮೃತಿವಿರುದ್ಧತ್ವಾತ್ ಸ್ಮೃತಯೋ ನ ಗುಣಾನ್ ಹರೇಃ ।
ನಿಷೇದ್ಧುಂ ಶಕ್ನುಯುರ್ವೇದಾ ನಿತ್ಯತ್ವಾನ್ಮಾನಮುತ್ತಮಮ್ ॥ ೧ ॥
ದೇವತಾ ವಚನಾದಾಪೋ ವದಂತೀತ್ಯಾದಿಕಂ ವಚಃ ।
ನಾಯುಕ್ತವಾದ್ಯನನ್ಯೈವ ಕಾರಣಂ ದೃಶ್ಯತೇ ಕ್ವಚಿತ್ ॥ ೨ ॥
ಅಸಜ್ಜೀವ ಪ್ರಧಾನಾದಿ ಶಬ್ದಾ ಬ್ರಹ್ಮೈವ ನಾಪರಂ ।
ವದಂತಿ ಕಾರಣತ್ವೇನ ಕ್ವಾಪಿ ಪೂರ್ಣಗುಣೋ ಹರಿಃ ॥ ೩ ॥
ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾತ್ ನಾಯುಕ್ತಂ ತದ್ವದೇತ್ ಶ್ರುತಿಃ ।

ಶ್ರೌತಸ್ಮೃತಿ ಇತ್ಯಾದಿಗಳಿಂದ ಯುಕ್ತಿಪಾದಾರ್ಥವನ್ನು ಸಂಗ್ರಹಿಸುತ್ತಾರ–

ಓಂ ಸ್ಮೃತ್ಯನವಕಾಶ ದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶ ದೋಷಪ್ರಸಂಗಾತ್ ಓಂ" ಈ ಪ್ರಥಮಾಧಿಕರಣದ ಅರ್ಥವನ್ನು 'ಶ್ರೌತಸ್ಮೃತಿ' ಇತ್ಯಾದಿ ಪದಗಳಿಂದ ಸಂಗ್ರಹಿಸಿದ್ದಾರ ಶ್ರುತಿಸಂವಾದಿಯಾದ ಪಂಚರಾತ್ರಾದಿ ಸ್ಮೃತಿಗಳಿಂದ ಬಾಧಿತವಾಗುವುದರಿಂದ (ಶ್ರುತ್ಯನುಸಾರೀ ಪಂಚರಾತ್ರಸ್ಮೃತಿಗಳಿಗ ವಿರುದ್ಧವಾಗಿರುವುದರಿಂದ) ಶೈವಾದಿಸ್ಮೃತಿಗಳು ಶ್ರುತ್ಯುಕ್ತವಾದ ಶ್ರೀ ಹರಿಯಗುಣಗಳನ್ನು ಅಲ್ಲಗಳೆಯಲು (ಶ್ರೀ ಹರಿಯಲ್ಲಿ ಗುಣಗಳಿಲ್ಲವೆಂದು ತಿಳಿಸಿಕೊಡಲು) ಸಮರ್ಥವಾಗುವದಿಲ್ಲ 'ಓಂ ನ ವಿಲಕ್ಷಣತ್ವಾತ್ ಅಸ್ಯ ತಥಾತ್ವಂ ಚ ಶಬ್ದಾತ್ ಓಂ" ಈ ಅಧಿಕರಣಾರ್ಥವನ್ನು 'ವೇದಾನಿತ್ಯತ್ವಾತ್ ಮಾನಮುತ್ತಮಮ್" ಪದಗಳಿಂದ ಸಂಗ್ರಹಿಸಿದ್ದಾರೆ ವೇದಗಳು ನಿತ್ಯವಾದ್ದರಿಂದ. ಅಪೌರುಷೇಯುಗಳಾಗಿದ್ದರಿಂದ ಉತ್ತಮವಾದ ನಿರ್ದುಷ್ಟ ಪ್ರಮಾಣಗಳೆನಿಸಿವೆ ಸಂವಾದ ನಿರಪೇಕ್ಷಗಳಾಗಿವೆ ವೇದಾನುಸಾರಿಯಾದ ಸ್ಮೃತಿಗಳೂ ಕೂಡ ಉತ್ತಮ ಪ್ರಮಾಣಗಳಾಗಿವೆ

ಪುರುಷದೋಷ ನಿಬಂಧನರೂಪವಾದ ದೋಷಗಳು ವೇದಗಳಲ್ಲಿ ಇಲ್ಲವಾದುದರಿಂದ ವೇದಗಳು ಅಪ್ರಮಾಣಗಳಲ್ಲವೆಂದು ತಿಳಿಸಲು ಅಭಿಮಾನ್ಯಧಿಕರಣವು ಹೊರಟಿದೆ ನೀರು ಮಾತಾಡುತ್ತದೆ ಇವೇ ಮೊದಲಾದ ವೇದವಾಕ್ಯಗಳು ಆಯಾ ಅಭಿಮಾನಿ ದೇವತಾ ಪರವಾಗಿರುವುದರಿಂದ ಯುಕ್ತಿಗೆ ವಿರುದ್ಧವಾದ ಅರ್ಥ ಪ್ರತಿಪಾದಕಗಳಲ್ಲ "ಆಪೋಽಬ್ರುವನ್" ಇದರ ಅನುವಾದವೇ "ಆಪೋವದಂತಿ" ಎಂದಾಗಿ ಹೇಳಲ್ಪಟ್ಟಿದ "ಆಪೋಽಬ್ರುವನ್" "ತತ್ತೇಜ ಐಕ್ಷತ್' ಇತ್ಯಾದಿ ವಾಕ್ಯಗಳು ವಿರುದ್ಧಾರ್ಥಗಳಲ್ಲ ಏಕೆಂದರೆ ಆಯಾ ಅಭಿಮಾನಿ (ನೀರು. ಅಗ್ನಿ ಮುಂತಾದವುಗಳ) ದೇವತೆಗಳ ಪರವಾಗಿವೆ ಸ್ವತಂತ್ರವಾದ ಕರ್ತೃವಿನಿಂದ ಜರುಗತಕ್ಕ ಕ್ರಿಯೆಗಳನ್ನು ನಿರೂಪಿಸುವ ವಾಕ್ಯವು ಹೇಗೆ ಅಬಾಧಿತವಾದ ಅರ್ಥವನ್ನು

ಕೊಡುತ್ತದೆಯೋ ಹಾಗೆಯೇ ಅಭಿಮಾನಿದೇವತಾ ಕರ್ತೃಕವಾದ ಆಪೋಽಬ್ರುವನ್'' ಇತ್ಯಾದಿವಾಕ್ಯಗಳು ನಿರ್ದುಷ್ಟವಾದ ಅರ್ಥವನ್ನು ತಿಳಿಸುತ್ತವೆ ಓಂ ಅಸದಿತಿ ಚೇನ್ನ ಪ್ರತಿಷೇಧ ಮಾತ್ರತ್ವಾತ್ ಓಂ'' ಈ ಅಧಿಕರಣಾರ್ಥವು ಅನನ್ಯೈವ ಕಾರಣಂ ದೃಷ್ಟಂ ಕ್ವಚಿತ್' ಪದಗಳಿಂದ ಹೇಳಲ್ಪಟ್ಟಿದೆ ಅಸತ್ ಶಬ್ದವು ಅಭಾವ ಮತ್ತು ಅಭಾವ ಪ್ರತಿಯೋಗಿ ಎಂಬ ಎರಡು ಅರ್ಥಗಳನ್ನು ಹೇಳುತ್ತದೆ ಅಸತ್ತು ಜಗತ್ಕಾರಣವಲ್ಲ ಅಸತ್ತು ಯಾವ ಸ್ಥಳದಲ್ಲಿಯೂ ಯಾವ ಪ್ರಮಾಣಗಳಿಂದಲೂ ಯಾವ ವಸ್ತುವಿಗೂ ಕಾರಣವೆಂಬುದಾಗಿ ತೋರುವದಿಲ್ಲ

'ಓಂ ಏತೇನ ಶಿಷ್ಟಾಅಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ' ಈ ಅಧಿಕರಣಾರ್ಥವನ್ನು 'ಅಸಜ್ಜೀವ ಪ್ರಧಾನಾದಿ ಶಬ್ದಾಬ್ರಹ್ಮೈವ ನಾಪರಮ್ ವದಂತಿ ಕಾರಣತ್ವೇನಕ್ವಾಪಿ' ಪದಗಳಿಂದ ಸಂಗ್ರಹಿಸಿದ್ದಾರೆ ಅಸತ್ತು ಜಗತ್ಕಾರಣವೆಂದು ಎಲ್ಲಿಯೂ ಹೇಳಿಲ್ಲ ಹಾಗಯೇ ಜೀವ, ಪ್ರಧಾನ. ಕಾಲ ಕರ್ಮಾದಿಗಳು ಕೂಡ ಜಗತ್ಕಾರಣವಂದು ಎಲ್ಲಿಯೂ ಕಂಡು ಬಂದಿರುವುದಿಲ್ಲ ಈ ಶಬ್ದಗಳು ವಿಷ್ಣುವನ್ನೇ ಜಗತ್ತಿಗೆ ಕಾರಣವೆಂದು ಹೇಳುತ್ತವೆ (ಬೇರೆಯಾವುದೂ ಕಾರಣವಲ್ಲ) ಸುಖಾದಿಗಳಲ್ಲಿ ಜೀವನಿಗೆ ಅಸ್ವಾತಂತ್ರ್ಯವು ಕಂಡು ಬಂದಿರುವುದರಿಂದ, ಪ್ರಧಾನಾದಿಗಳು ಜಡಗಳಾದ್ದರಿಂದ. ಅಸ್ವತಂತ್ರಗಳೆನಿಸಿರುವುದರಿಂದ, ಅಸತ್ತೇ ಮೊದಲಾದ ಶಬ್ದಗಳು ಎಲ್ಲವೂ ವಿಷ್ಣುವಿನ ಅಧೀನವಾದ್ದರಿಂದ ವಿಷ್ಣುವೇ ಜಗತ್ಕಾರಣನೆಂದು ಹೇಳುತ್ತವೆ

ಭೋಕ್ತ್ರಾಪತ್ತೇಃ'' ಈ ಅಧಿಕರಣದ ಅರ್ಥವನ್ನು ಪೂರ್ಣಗುಣೋಹರಿಃ'' ಶಬ್ದಗಳಿಂದ ತಿಳಿಸಿದ್ದಾರೆ. ಜೀವೇಶ ಭೇದವು ನಿರ್ದೋಷವಾದ ಶ್ರುತಿಗಳಿಂದ ಸಿದ್ಧವಾದ ಪ್ರಮೇಯವಾದ್ದರಿಂದ ಅಭೇದಕ್ಕ ಬಾಧವು ಬರುವುದರಿಂದ ಗುಣಗಳಿಂದ ಪರಿಪೂರ್ಣನಾಗಿರುವವನು ಶ್ರೀಹರಿಯೇ ಎಂದರ್ಥವು

'ಓಂ ತದನನ್ಯತ್ವಮಾರಂಭಣ ಶಬ್ದಾದಿಭ್ಯಃ ಓಂ'' ಈ ಅಧಿಕರಣದ ತಾತ್ಪರ್ಯವನ್ನು 'ಸ್ವಾತಂತ್ರ್ಯಾತ್''ಪದದಿಂದ ತಿಳಿಸಿದ್ದಾರ ಶ್ರೀಹರಿಯೇ ಸ್ವತಂತ್ರನಾದ್ದರಿಂದ ಉಳಿದವಲ್ಲ ಸಾಧನಗಳು ಅವನ ವಶವರ್ತಿಗಳಾದ ಪ್ರಯುಕ್ತ ಇನ್ನೊಂದು ಸ್ವತಂತ್ರ ಸಾಧನವನ್ನು ಅವಲಂಬಿಸಿ ಜಗತ್ತನ್ನು ಸೃಷ್ಟಿಸಿಲ್ಲ (ತನ್ನಿಂದ ಭಿನ್ನವಲ್ಲದ ಸಾಮರ್ಥ್ಯದಿಂದಲೇ ಶ್ರೀ ಹರಿಗೆ ಸರ್ವಕರ್ತೃತ್ವ ಉಂಟು) ಆದ್ದರಿಂದ ''ಕಿಂಸ್ವಿತ್'' ಇತ್ಯಾದಿ ಶ್ರುತಿಗಳು ಅಯುಕ್ತವಾದುದನ್ನು ಹೇಳುವದಿಲ್ಲ ಯುಕ್ತಿಯುಕ್ತವಾದುದನ್ನೇ ಹೇಳುತ್ತವೆ

'ಓಂ ಇತರವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ ಓಂ'' ಈ ಅಧಿಕರಣಾರ್ಥವನ್ನು ''ಸರ್ವಕರ್ತೃತ್ವಾತ್ ನಾಯುಕ್ತಂ ತದ್ವದೇತ್ ಶ್ರುತಿಃ'' ಶಬ್ದಗಳಿಂದ ಸಂಗ್ರಹಿಸಿದ್ದಾರೆ ಶ್ರೀಹರಿಯೇ ಸರ್ವಕರ್ತೃವಾಗಿರುವುದರಿಂದ, ಯುಕ್ತಿವಿರುದ್ಧವಾದ ಜೀವ ಕರ್ತೃತ್ವವನ್ನು ಶ್ರುತಿಯು ಹೇಳುವುದಿಲ್ಲ

''ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ'' ಇತ್ಯಾದಿ ನಾಲ್ಕು ಅಧಿಕರಣಗಳ ಅರ್ಥವನ್ನು 'ಸರ್ವಕರ್ತೃತ್ವಾತ್ ನಾಯುಕ್ತಂ ತದ್ವದೇತ್ ಶ್ರುತಿಃ'' ಪದಗಳಿಂದ ಸಂಗ್ರಹಿಸಿದ್ದಾರೆ ಶ್ರೀ ಹರಿಯ ನಿರ್ದೋಷತ್ವ, ಸ್ರಷ್ಟೃತ್ವಾದಿ ಅನಂತ

ಗುಣಪೂರ್ಣತ್ವವು ಯುಕ್ತವೇ ಆಗಿದೆ ಆಯಾ ಅಧಿಕರಣಗತವಾದ ಪೂರ್ವಪಕ್ಷದಲ್ಲಿ ಹೇಳಿದ ಯುಕ್ತಿಗೆ ವಿರುದ್ಧವಾದರೂ ಕೂಡ ನಿರ್ದೋಷ ಶ್ರುತಿಯು ಹಾಗೆ ಹೇಳುವುದಿಲ್ಲವಾದ್ದರಿಂದ ಶ್ರೀ ಹರಿಯೇ ಸರ್ವಕರ್ತೃವೆಂಬು ಸಿದ್ಧವಾಗುತ್ತದೆ ಇಲ್ಲಿ ಯುಕ್ತಿಗಳನ್ನು ಆಯಾ ಅಧಿಕರಣವಾಕ್ಯ ಟೀಕಾವಾಕ್ಯಗಳಿಂದ ತಿಳಿಯತಕ್ಕದ್ದು

ಅಣುಭಾಷ್ಯ ವಿವರಣೆಯಲ್ಲಿ
॥ ದ್ವಿತೀಯಾಧ್ಯಾಯದ ಪ್ರಥಮ ಪಾದವು ಮುಗಿದುದು ॥

**ಭ್ರಾಂತಿಮೂಲತಯಾ ಸರ್ವಸಮಯಾನಾಮಯುಕ್ತಿತಃ ॥ ೪ ॥**
**ನತದ್ವಿರೋಧಾದ್ವಚನಂ ವೈದಿಕಂ ಶಂಕ್ಯತಾಂ ವ್ರಜೇತ್ ॥**

ಸಮಯಪಾದದ ವಿವರಣೆಯನ್ನು ಭಾಷ್ಯದಲ್ಲಿ ಕೊಟ್ಟಿರುವುದರಿಂದ ಅದನ್ನೇ ಸಂಕುಚಿತವನ್ನಾಗಿ ಮಾಡಿ "ಭ್ರಾಂತಿಮೂಲತಯಾ" ಶಬ್ದಗಳಿಂದ ಸಂಗ್ರಹಿಸಿದ್ದಾರೆ ವೈದಿಕಂ ಶಂಕ್ಯತಾಂ ವ್ರಜೇತ್ ಪದದಿಂದ ಈ ಮುಂದೆ ಹೇಳುವ ಅರ್ಥವನ್ನು ತಿಳಿಸಿದ್ದಾರೆ

ಶ್ರೀ ಬಾದರಾಯಣರ ಮತವನ್ನು ಬಿಟ್ಟು ಉಳಿದ ಅಕ್ಷಪಾದ ಕಣಾದ ಸಾಂಖ್ಯಯೋಗ, ಅರ್ಹತ ಶಿವ ಶಕ್ತಿ ಲೋಕಾಯತ ಇತ್ಯಾದಿಗಳು ದುಷ್ಟಮತಗಳಾಗಿವೆ ಹಾಗೂ ಬೃಹದ್ಭಾಷ್ಯದಲ್ಲಿ ಹೇಳಿರುವಂತೆ ಈ ಮತಗಳು ಭ್ರಾಂತಿಜನಕಗಳಾಗಿರುವುದರಿಂದ ವಿಪ್ರಲಂಭಾದಿ ಮೂಲವುಳ್ಳವುಗಳಾಗಿರುವುದರಿಂದ ಯುಕ್ತಿವಿರುದ್ಧಗಳೂ ಆಗಿರುವುದರಿಂದ ಇವೆಲ್ಲವೂ ಅಪ್ರಮಾಣವಾಗಿವೆ ಯುಕ್ತಿ ಶೂನ್ಯಗಳಾಗಿವೆ ಆ ದುಷ್ಟಸಮಯಗಳ ವಿರೋಧದಿಂದ ಶ್ರುತಿವಾಕ್ಯವು ಅಪ್ರಮಾಣವೆಂಬ ಶಂಕಾಸ್ಪದವನ್ನು ಎಂದಿಗೂ ಹೊಂದುವುದಿಲ್ಲ

ಅಣುಭಾಷ್ಯ ವಿವರಣೆಯಲ್ಲಿ
॥ ದ್ವಿತೀಯಾಧ್ಯಾಯದ ದ್ವಿತೀಯ ಪಾದವು ಮುಗಿದುದು ॥

**ಆಕಾಶಾದಿಸಮಸ್ತಂಚ ತಜ್ಜಂ ತೇನೈವ ಲೀಯತೇ ॥ ೫ ॥**
**ಸೋಽನುತ್ಪತ್ತಿಲಯಃ ಕರ್ತಾ ಜೀವಸ್ತದ್ವಶಗಸ್ಸದಾ ।**
**ತದಾಭಾಸೋ ಹರಿಸ್ಸರ್ವರೂಪೇಷ್ವಪಿ ಸಮಸ್ಸದಾ ॥ ೬ ॥**

"ಆಕಾಶಾದಿ" ಈ ಅರ್ಧಶ್ಲೋಕದಿಂದ" ವಿಯತ್ ಪಾದಾರ್ಥವನ್ನು ಸಂಗ್ರಹಿಸುತ್ತಾರೆ

"ಓಂ ನ ವಿಯದಶ್ರುತೇಃ ಓಂ", "ಓಂ ಏತೇನ ಮಾತರಿಶ್ವಾವ್ಯಾಖ್ಯಾತಃ ಓಂ"

"ಓಂ ತೇಜೋಽತಸ್ತಥಾಹ್ಯಾಹ ಓಂ", "ಓಂ ಆಪಃ ಓಂ"

"ಓಂ ಪೃಥಿವ್ಯಧಿಕಾರರೂಪ ಶಬ್ದಾಂತರಾದಿಭ್ಯಃ ಓಂ" "ಓಂ ಜ್ಞೋಽತ ಏವ ಓಂ"

"ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ ನಃ ಓಂ"

"ಓಂ ವಿಪರ್ಯಯೇಣತು ಕ್ರಮೋಽತ ಉಪಪದ್ಯತೇ ಚ ಓಂ' ಈ ಎಂಟು ಅಧಿಕರಣಗಳ ಅರ್ಥವನ್ನು "ಆಕಾಶಾದಿ" ಶಬ್ದಗಳಿಂದ ಸಂಗ್ರಹಿಸಿದ್ದಾರೆ

ಇಲ್ಲಿ ಆಕಾಶಾದಿಪದವು ಅವ್ಯಾಕೃತಾಕಾಶವೇ ಮೊದಲಾದ ಪಂಚಮಹಾಭೂತಗಳು ಹಾಗೂ ತದಭಿಮಾನಿ ದೇವತೆಗಳೆಲ್ಲರ ಉಪಲಕ್ಷಕವಾಗಿದ ಆಕಾಶ ಮೊದಲುಮಾಡಿ ಜೀವರವರೆಗೆ ನಿತ್ಯಾನಿತ್ಯ ಸಮಸ್ತ ಪ್ರಪಂಚವು ಶ್ರೀಹರಿಯಿಂದಲೇ ಸೃಷ್ಟವಾಗಿದ ಇದರಲ್ಲಿ ಲಕ್ಷ್ಮೀದೇವಿಯರ ಸೃಷ್ಟಿ ಪ್ರಕೃತಿಯ ಪರಿಣಾಮ ಅವ್ಯಾಕೃತಾಕಾಶದ ಮೂರ್ತಸಂಬಂಧ ಜೀವರ ದೇಹಸಂಬಂಧ ಸೃಷ್ಟಿಯಾಗದಿರುವ ಪದಾರ್ಥಗಳ ಉಪಚಯ (ಬೆಳವಣಿಗೆ), ಅನಿತ್ಯ ಪದಾರ್ಥಗಳಿಗೆ ಸ್ವರೂಪತಃ ಉತ್ಪತ್ತಿಯು ಹಾಗೂ ನಿತ್ಯ ಪದಾರ್ಥಗಳ ಪರಾಧೀನತೆಯೆಂಬ ವಿಶೇಷಾವಾಪ್ತಿ (ಹೊಂದುವಿಕೆ) ರೂಪ ಉತ್ಪತ್ತಿಯನ್ನು ತಿಳಿಯಬೇಕು ಉತ್ಪತ್ತಿಯನ್ನು ಹೊಂದಿದ ಪದಾರ್ಥಗಳಿಗೆ ಆ ಶ್ರೀಹರಿಯಿಂದಲೇ ಉತ್ಪತ್ತಿಕ್ರಮ ವಿರುದ್ಧವಾಗಿ ಲಯವು ಯಥಾಯೋಗ್ಯವಾಗಿ ಉಂಟಾಗುತ್ತದೆ ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ "ಓಂ ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ಓಂ" ಈ ಎರಡು ಅಧಿಕರಣಗಳ ಅರ್ಥವನ್ನು 'ಸೋಽನುತ್ಪತ್ತಿಲಯಃ'' ಶಬ್ದಗಳಿಂದ ಸಂಗ್ರಹಿಸಿದ್ದಾರೆ ವಿಷ್ಣುವು ಸ್ವತಂತ್ರಕರ್ತನಾದ್ದರಿಂದ ಅವನು ಉತ್ಪತ್ತಿ ಲಯಗಳಿಂದ ರಹಿತನಾಗಿರುವನು

ಓಂ ಉತ್ಕ್ರಾಂತಿಗತ್ಯಾಗತೀನಾಮ್ ಓಂ" "ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ" ಓಂ ಪೃಥಗುಪದೇಶಾತ್ ಓಂ" ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ", ಓಂ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ" ಓಂ ಕರ್ತಾಶಾಸ್ತ್ರಾರ್ಥವತ್ವಾತ್ ಓಂ" ಈ ಆರು ಅಧಿಕರಣಗಳ ಅರ್ಥವನ್ನು ಕರ್ತಾಜೀವಸ್ತದ್ವಶಗಃ" ಶಬ್ದಗಳಿಂದ ಸಂಗ್ರಹಿಸಿದ್ದಾರೆ. ಯಾವಾಗಲೂ ಜೀವನು ಶ್ರೀ ಹರಿಯ ಅಧೀನನಾಗಿರುವವನು ಮತ್ತು ಶ್ರೀ ಹರಿಯ ಅಧೀನವಾದ ಕರ್ತೃತ್ವವುಳ್ಳವನಾಗಿರುವನು

ಓಂ ಅಂಶೋನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇಓಂ". "ಓಂ ಅದೃಷ್ಟಾನಿಯಮಾತ್ ಓಂ" ಈ ಎರಡು ಅಧಿಕರಣಗಳ ತಾತ್ಪರ್ಯವನ್ನು "ಜೀವಸ್ತದ್ವಶಗಃ ಸದಾ", "ತದಾಭಾಸೋ ಹರಿಃ ಸರ್ವರೂಪೇಷ್ವಪಿ ಸಮಸ್ಸದಾ" ಈ ಶಬ್ದಗಳಿಂದ ಸಂಗ್ರಹಿಸಿದ್ದಾರೆ

ಜೀವನು ಯಾವಾಗಲೂ ಶ್ರೀಹರಿಯ ವಶನಾಗಿದ್ದು ಅವನಿಗೆ ಪ್ರತಿಬಿಂಬನಾಗಿರುವನು ಶ್ರೀ ಹರಿಯು ಮತ್ಸ್ಯ, ಕೂರ್ಮ ವರಾಹಾದಿ, ಎಲ್ಲರೂಪಗಳಲ್ಲಿ ಭೇದರಹಿತನಾಗಿ ಯಾವಾಗಲೂ ಸಮನಾಗಿರುವನು ಹೀಗಿದ್ದರೂ ಅವನ ಪ್ರತಿಬಿಂಬನಾದ ಜೀವನು ಅದೃಷ್ಟ ವೈಚಿತ್ರ್ಯದಿಂದಾಗಿ ಸುರ, ಅಸುರ, ನರ, ತಿರ್ಯಕ್ ಮೊದಲಾದ ವಿಚಿತ್ರ ರೂಪವುಳ್ಳವನಾಗಿರುವನು

**ಅಣುಭಾಷ್ಯ ವಿವರಣೆಯಲ್ಲಿ**

**॥ ದ್ವಿತೀಯಾಧ್ಯಾಯದ ಮೂರನೆಯ ಪಾದವು ಮುಗಿದುದು ॥**

ಮುಖ್ಯಪ್ರಾಣಶ್ಚೇಂದ್ರಿಯಾಣಿ ದೇಹಶ್ಚೈವ ತದುದ್ಭವಃ ।
ಮುಖ್ಯಪ್ರಾಣವಶೇಸರ್ವಂ ಸವಿಷ್ಣೋರ್ವಶಗಸ್ಸದಾ ॥ ೭ ॥
ಸರ್ವದೋಷೋಜ್ಝಿತಃ ತಸ್ಮಾದ್ಭಗವಾನ್ ಪುರುಷೋತ್ತಮಃ ।
ಉಕ್ತಾಗುಣಾಶ್ಚಾ ವಿರುದ್ಧಾಸ್ತಸ್ಯ ವೇದೇನ ಸರ್ವಶಃ ॥ ೮ ॥

"ಓಂ ತಥಾ ಪ್ರಾಣಾಃ ಓಂ" "ಓಂ ತತ್ಪೂರ್ವಕತ್ವಾದ್ವಾಚಃ ಓಂ", ಓಂ ಸಪ್ತಗತೇರ್ವಿಶೇಷಿತತ್ವಾಚ್ಚ ಓಂ" ಓಂ ಅಣವಶ್ಚ ಓಂ" ಓಂ ಶ್ರೇಷ್ಠಶ್ಚ ಓಂ" ಈ ಅಧಿಕರಣಗಳ ತಾತ್ಪರ್ಯವನ್ನು ಮುಖ್ಯಪ್ರಾಣಶ್ಚೇಂದ್ರಿಯಾಣಿ "ಮುಖ್ಯಪ್ರಾಣಸ್ತದುದ್ಭವಃ" ಶ್ಲೋಕಭಾಗದಿಂದ ಸಂಗ್ರಹಿಸಿದ್ದಾರ ಮುಖ್ಯಪ್ರಾಣನು ವಿಷ್ಣುವಿನಿಂದ ಉತ್ಪತ್ತಿಉಳ್ಳವನಾಗಿದ್ದಾನೆ ಇಂದ್ರಿಯಗಳೂ ಸಹ ವಿಷ್ಣುವಿನಿಂದ ಉತ್ಪತ್ತಿಯನ್ನು ಹೊಂದುತ್ತವ "ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ಓಂ" ಈ ಅಧಿಕರಣಾರ್ಥವನ್ನು ದೇಹಶ್ಚೈವ ತದುದ್ಭವಃ ಎಂಬುದಾಗಿ ಸಂಗ್ರಹಿಸಿದ್ದಾರ ದೇಹಾದಿಲಕ್ಷಣರೂಪನಾಮಾತ್ಮಕ ಪ್ರಪಂಚವುಕೂಡ ವಿಷ್ಣುವಿನಿಂದಲೇ ಉತ್ಪತ್ತಿಯನ್ನು ಹೊಂದುತ್ತದೆ "ಚಕ್ಷುರಾದಿವತ್ತು ತತ್ಪರಿಹಾರಾದಿಭ್ಯಃ" ಈ ಅಧಿಕರಣಾರ್ಥವನ್ನು "ಮುಖ್ಯಪ್ರಾಣವಶೇ" ಎಂದಾಗಿ ತಿಳಿಸಿದ್ದಾರ ಎಲ್ಲ ಜಗತ್ತುಯಾವಾಗಲೂ ಮುಖ್ಯಪ್ರಾಣನ ವಶದಲ್ಲಿ ಇರುತ್ತದೆ ಆ ಮುಖ್ಯಪ್ರಾಣನು ಯಾವಾಗಲೂ ವಿಷ್ಣುವಿನ ಅಧೀನದಲ್ಲಿರುವನು ಪಾದಾರ್ಥವನ್ನು "ಸರ್ವದೋಷೋಜ್ಝಿತಃ ಪದದಿಂದ ಸಂಗ್ರಹಿಸಿದ್ದಾರೆ ಇಲ್ಲಿಯವರಗ ಪ್ರತಿಪಾದಿಸಿದಂತೆ ಶ್ರುತಿಗಳಿಗ ಪರಸ್ಪರ ವಿರೋಧವಿಲ್ಲದ್ದರಿಂದ ವಿಷ್ಣುವು ಎಲ್ಲದೋಷಗಳಿಂದ ರಹಿತನಾಗಿದ್ದಾನೆ ಆದ್ದರಿಂದಲೇ ಅವನು ಷಡ್ಗುಣೈಶ್ವರ್ಯ ಸಂಪನ್ನನೂ ಸರ್ವೋತ್ತಮನೂ ಆಗಿದ್ದಾನೆ

ಅಧ್ಯಾಯಾರ್ಥವನ್ನು ಉಕ್ತಾ" ಶಬ್ದದಿಂದ ಉಪಸಂಹರಿಸುತ್ತಾರೆ ವೇದಗಳಿಂದ ಹೇಳಲ್ಪಟ್ಟ ಸಮಸ್ತವಾದ ಆ ವಿಷ್ಣುವಿನ ಜ್ಞಾನಾನಂದಾದಿಗುಣಗಳು, ಜಗತ್ ಕರ್ತೃತ್ವಾದಿ ಸಕಲಗುಣಗಳು ಯುಕ್ತ್ಯಾದಿ ನಾಲ್ಕುವಿಧ ವಿರೋಧರಹಿತಗಳೆಂದು ಸಿದ್ಧವಾಗುತ್ತದೆ (ಯುಕ್ತಿ ವಿರೂಧ ಸಮಯವಿರೋಧ, ಪರಸ್ಪರ ಶ್ರುತಿವಿರೋಧ ನ್ಯಾಯೋಪೇತ ಶ್ರುತಿವಿರೋಧಗಳೆಂಬ ನಾಲ್ಕುವಿಧ ವಿರೋಧಗಳ ಪರಿಹಾರವನ್ನು ಈ ಎರಡನೆಯ ಅಧ್ಯಾಯದಲ್ಲಿ ಮಾಡಿದ್ದಾರೆ)

ಅಣುಭಾಷ್ಯ ವಿವರಣೆಯಲ್ಲಿ

॥ ದ್ವಿತೀಯ ಅಧ್ಯಾಯದ ನಾಲ್ಕನೆಯ ಪಾದವು ಮುಗಿದುದು ॥

ಶುಭೇನ ಕರ್ಮಣಾಸ್ವರ್ಗಂ ನಿರಯಂ ಚ ವಿಕರ್ಮಣಾ ।
ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂ ಪದಮ್ ॥ ೧ ॥
ಯಾತಿ ತಸ್ಮಾದ್ವಿರಕ್ತಸ್ಸನ್ ಜ್ಞಾನಮೇವ ಸಮಾಶ್ರಯೇತ್ ।

ಇಲ್ಲಿ ಈ ಪಾದದ ಕೆಲವು ಅಧಿಕರಣಗಳ ತಾತ್ಪರ್ಯವನ್ನು ಶುಭೇನ" ಪದಗಳಿಂದ ಸಂಗ್ರಹಿಸಿದ್ದಾರೆ

ಓಂ ತದಂತರ ಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನ ನಿರೂಪಣಾಭ್ಯಾಮ್ ಓಂ ಓಂ ಅಮೃತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ ಈ ವರೆಗಿನ ಆರು ಅಧಿಕರಣಗಳ ಅರ್ಥವನ್ನು ಜ್ಞಾನೇನೈವ ಪರಂ ಯಾತಿ" ಶಬ್ದಗಳಿಂದ ಸಂಗ್ರಹಿಸಿದ್ದಾರೆ ಪ್ರಸಿದ್ಧವಾದ ಮರಣವೇ ಮೋಕ್ಷವೆಂದೂ, ಮೋಕ್ಷವು ನಿತ್ಯವಾದುದರಿಂದ ವಿಷಯಗಳಲ್ಲಿ ವೈರಾಗ್ಯ ಹೊಂದಬೇಕೆಂಬುದು ವ್ಯರ್ಥವೆಂದು ಪೂರ್ವಪಕ್ಷ ಮಾಡಿದಾಗ ಅದನ್ನು ಜ್ಞಾನೇನೈವ" ಜ್ಞಾನದಿಂದಲೇ ಮೋಕ್ಷವೆಂದು ತಿಳಿಸಿ ಪೂರ್ವಪಕ್ಷವನ್ನು ನಿರಾಕರಿಸುತ್ತಾರೆ

ಪ್ರಸಿದ್ಧವಾದ ಮರಣವೇ ಮೋಕ್ಷವಲ್ಲ ಮೋಕ್ಷವು ಜ್ಞಾನಮಾತ್ರದಿಂದಸಾಧ್ಯವು ಜ್ಞಾನವಿಲ್ಲದಿದ್ದರೂ ಮರಣ ಬಂದೇ ಬರುತ್ತದೆ ನ್ಯಾಯವಿವರಣ ಗ್ರಂಥದಲ್ಲಿ ಜ್ಞಾನಾದಿಗುಣಗಳನ್ನು ಹೊಂದಲೇಬೇಕೆಂದು ತಿಳಿಸಿದ್ದಾರೆ ಮೋಕ್ಷವು ಜ್ಞಾನಮಾತ್ರದಿಂದ ಸಾಧ್ಯವಾದ ಕಾರಣ ಅದಕ್ಕಾಗಿ ವೈರಾಗ್ಯಾದಿಗಳು ಅವಶ್ಯಕವೆಂದು ಭಾವವು

"ಓಂ ಭಾಕ್ತಂವಾಽನಾತ್ಮವಿತ್ವಾತ್ ತಥಾಹಿ ದರ್ಶಯತಿ ಓಂ" ಈ ಸಪ್ತಮಾಧಿಕರಣದ ತಾತ್ಪರ್ಯವನ್ನು ಶುಭೇನ ಕರ್ಮಣಾ ಸ್ವರ್ಗಂ ಜ್ಞಾನೇನೈವ ಪರಂಪದಂ" ಎಂಬ ಪದಗಳಿಂದ ಸಂಗ್ರಹಿಸಿದ್ದಾರೆ

"ಅಪಾಮಸೋಮ ಅಮೃತಾ ಅಭೂಮ" ಶ್ರುತಿಯಲ್ಲಿ ಒಳ್ಳೆಯ ವೈದಿಕಕರ್ಮಗಳಿಂದ ಮೋಕ್ಷಸಾಧನವೆಂದು ಹೇಳಿದ್ದರಿಂದ ವೈರಾಗ್ಯಾದಿಗಳನ್ನು ಸಂಪಾದಿಸಲು ಆಯಾಸಪಡುವುದು ವ್ಯರ್ಥವೆಂಬ ಶಂಕೆಯು ನಿರಾಸವಾಯಿತು

ಕರ್ಮಗಳಿಂದ ಮೋಕ್ಷದೊರಕುವುದಿಲ್ಲ 'ಅಪಾಮಸೋಮ" ಈ ಶ್ರುತಿಗೆ ಅನ್ಯಾರ್ಥವಿದೆ ಇಲ್ಲಿ ಸೋಮಯಾಗದಿಂದ ಅಮೃತ ಸಾಧನತ್ವವು ತೋರುತ್ತದೆ ಅದು ಕಾಮ್ಯವೇ, ಅಕಾಮ್ಯವೇ ? ಎಂಬ ಪ್ರಶ್ನೆ ಬರುತ್ತದೆ "ಶುಭೇನ" ಎಂಬುವದರಿಂದ ಮೊದಲಿನದಕ್ಕೆ ದೋಷವನ್ನು ಹೇಳುತ್ತಾರೆ ಕಾಮ್ಯದಿಂದ ಎಂದರ್ಥವು ಹೀಗಿದ್ದರೂ ' ಅಮೃತೋ ವಾ ಸೋಮಪೋ ಭವತಿ" ಸೋಮರಸವನ್ನು ಕುಡಿದವನು ಮರಣರಹಿತನಾಗುತ್ತಾನೆ ಈ ಶ್ರುತ್ಯನುಸಾರವಾಗಿ ಅಮೃತ ಶಬ್ದವು ಗೌಣವೃತ್ತಿಯಿಂದ ಸ್ವರ್ಗವೆಂದು ಹೇಳಿದಂತೆ ಆಗುತ್ತದೆ ಇದರಿಂದ "ಭಾಕ್ತಂ", ಎಂಬ ಸೂತ್ರಾಂಶವು ವ್ಯಾಖ್ಯಾತವಾಯಿತು

ಇದನ್ನೇ ಭಾಷ್ಯದಲ್ಲಿ ತಿಳಿಸಿದ್ದಾರೆ ಶ್ರುತಿಯಲ್ಲಿ ಹೇಳಿರುವ ಅಮೃತತ್ವವು ಭಾಗತಃ ಒಪ್ಪತಕ್ಕದ್ದು ಕೆಲವು ಕಾಲ ಮಾತ್ರ ಸಿಗುವ ಸುಖವಾಗಿದೆ ನಿತ್ಯವಾದ ಮೋಕ್ಷ ಸುಖವಲ್ಲ, ಈ ಅರ್ಥವನ್ನೇ ಏಕೆ ಹೇಳಬೇಕು ? ಅಮೃತ ಶಬ್ದಕ್ಕೆ ನಿತ್ಯಸುಖರೂಪ ಮೋಕ್ಷವನ್ನೇಕೆ ಹೇಳಬಾರದು ? ಎಂದರೆ ಸೂತ್ರದಲ್ಲಿ "ಅನಾತ್ಮವಿತ್ವಾತ್" ಎಂದಿದ್ದಾರೆ ಅವರು ಆತ್ಮಜ್ಞಾನಿಗಳಲ್ಲವಾದ್ದರಿಂದ ಎಂಬ ಹೇತುವನ್ನು ಅಲ್ಲಿ ಹೇಳಿದ್ದಾರೆ "ಜ್ಞಾನೇನೈವ" ಎಂದಾಗಿ ಹೇಳಿರುವುದರಿಂದ ಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆ ಮಿಥ್ಯಾಜ್ಞಾನೇನ ಚ ಎಂಬಲ್ಲಿ ಚ ಶಬ್ದವು ಆವರ್ತನ ಮಾಡಲ್ಪಟ್ಟಿದೆ ಅದು ಹೇತ್ವರ್ಥಕವಾಗಿದೆ ಪರಮಾತ್ಮನ ಜ್ಞಾನದಿಂದ ಮಾತ್ರ ಶ್ರೇಷ್ಠವಾದ ಮೋಕ್ಷಪದವನ್ನು ಹೊಂದುತ್ತಾನೆ ಜ್ಞಾನಾತಿರಿಕ್ತವಾದ ಮೋಕ್ಷಮಾರ್ಗವೇ ಇಲ್ಲವೆಂದು ಶ್ರುತಿಯು ಹೇಳುತ್ತದೆ ಈ ಕಾರಣದಿಂದ ಮೋಕ್ಷವು ಕರ್ಮಸಾಧ್ಯವಲ್ಲವೆಂದು ಶ್ರುತ್ಯರ್ಥವು ಜಿಜ್ಞಾಸುಗಳಾದ ನಿಷ್ಕಾಮಕರ್ಮಿಗಳಿಗೆ ಅಮೃತತ್ವವು ಭಾಗ ವಿಷವಾಗಿದೆ (ಗೌಣವಾಗಿದೆ) ಅದು ಜ್ಞಾನದ್ವಾರಾ ಲಭಿಸುತ್ತದೆ "ಶುಭೇನ ಕರ್ಮಣಾ ಸ್ವರ್ಗಂ" ಇಲ್ಲಿ ಸ್ವರ್ಗಶಬ್ದವು ಜ್ಞಾನಪರವಾಗಿದೆ ಸ್ವತಂತ್ರನಾದ ಸುಖ ಜ್ಞಾನಪೂರ್ಣನಾದ ಪರಮಾತ್ಮನು ಯಾವ ಜ್ಞಾನದಿಂದ ಹೊಂದಲ್ಪಡುತ್ತಾನೋ ಅದು "ಸ್ವರ್ಗ"ವೆಂದು ಹೇಳಿದೆ ಹೀಗಿದ್ದರೂ ಕರ್ಮಗಳಿಂದ ಜ್ಞಾನವನ್ನು ಹೊಂದುತ್ತಾನೆ" ಈ ಶ್ರುತಿಯ ಪ್ರಕಾರ ಕರ್ಮಕ್ಕೆ ಪರಂಪರಯಾ (ಜ್ಞಾನಹೊಂದಿ) ಮೋಕ್ಷಸಾಧನತ್ವ ಉಂಟೆಂದು ಶ್ರುತ್ಯರ್ಥವು

ಒಂದು ವೇಳೆ ಜ್ಞಾನಿಗಳು ನಿಷ್ಕಾಮ ಕರ್ಮಗಳನ್ನು ಮಾಡಿದಾಗ್ಯೂ ಅಮೃತತ್ವವು ಭಾಗವಿಷಯಕವಾದುದು ಶುಭೇನ ಇತ್ಯಾದಿಗಳಿಂದ ಅದನ್ನೇ ವಿವರಿಸುತ್ತಾರೆ ಇಲ್ಲಿ ಸ್ವರ್ಗಶಬ್ದದಿಂದ ಮೋಕ್ಷಗತವಾದ ಸುಖಾತಿಶಯವು ಹೇಳಲ್ಪಡುತ್ತದೆ ಆ ಸುಖವು "ಸ್ವ" ಶಬ್ದದಿಂದ ಹೇಳಲ್ಪಟ್ಟಿದೆ ಆದರೂ "ಸಯ ಆತ್ಮಾನಮೇವ ಲೋಕಮುಪಾಸ್ತೇ" (ಯಾವನು ಆತ್ಮಶಬ್ದವಾಚ್ಯನಾದ ಭಗವಂತನನ್ನು ಉಪಾಸಿಸುವನೋ) ಈ ಶ್ರುತಿಯ ಪ್ರಕಾರ ಅಮೃತಶಬ್ದವು ಮೋಕ್ಷದ ಏಕದೇಶವಾದ ಅತಿಶಯ ಸುಖರೂಪವಾದುದು ಅಧಿಕರಣದ ಫಲಿತಾರ್ಥವನ್ನು ಹೇಳುತ್ತಾರೆ ಕಾಮ್ಯಕರ್ಮಗಳಿಂದ ಸ್ವರ್ಗವು ಲಭಿಸುತ್ತದೆ ಜ್ಞಾನದಿಂದಲೇ ಮೋಕ್ಷವು ಲಭಿಸುತ್ತದೆ ಆದ್ದರಿಂದ ಮೋಕ್ಷವನ್ನು ಇಚ್ಛಿಸುವ ಜಿಜ್ಞಾಸುಗಳು ಕಾಮ್ಯಕರ್ಮಗಳಲ್ಲಿ ವಿರಕ್ತಿಯನ್ನು ಹೊಂದಿ ಜ್ಞಾನವನ್ನೇ ಸಂಪಾದಿಸಬೇಕು

"ಓಂ ಕೃತಾತ್ಯಯೇಽನುಶಯವಾನ್ ದೃಷ್ಟಶ್ರುತಿಭ್ಯಾಮ್ ಓಂ" ಈ ಅಧಿಕರಣದ ಅರ್ಥವನ್ನು ಹೇಳುತ್ತಾರೆ "ಶುಭೇನ" ಇತ್ಯಾದಿಗಳಿಂದ ಶುಭಕರ್ಮಗಳನ್ನು ಆಚರಿಸಿ ಸ್ವರ್ಗಕ್ಕೆ ಹೋದ ಪುರುಷನು ಭುಕ್ತಕರ್ಮದ ಶೇಷದೊಂದಿಗೆ ತಿರುಗಿ ಬರುತ್ತಾನೆ "ಶೇಷೇಣೇಮಂ ಲೋಕಂ, ಭುಕ್ತಶೇಷಾನುಶಯವಾನ್" ಇತ್ಯಾದಿ ಶ್ರುತಿಸ್ಮೃತಿಗಳಿಂದ ಇದು ಸ್ಪಷ್ಟವಾಗುತ್ತದೆ ಹಾಗೆಯೇ "ಓಂ ಯದ್ಧೇತಮನೇವಂಚ ಓಂ" ಈ ನವಮಾಧಿಕರಣದ ತಾತ್ಪರ್ಯವನ್ನು ತಿಳಿಯತಕ್ಕದ್ದು ಎಂಬ ಅಭಿಪ್ರಾಯದಿಂದ "ಓಂ

ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ' ಈ ಅಧಿಕರಣ ತಾತ್ಪರ್ಯವನ್ನು 'ಜ್ಞಾನೇನ್ಯೈವ' ಪದದಿಂದ ತಿಳಿಸಿದ್ದಾರೆ ಯಾಕಂದರ 'ನಾನ್ಯಃ ಪಂಥಾ ಅಯನಾಯ' ಈ ಶ್ರುತಿಯಿಂದ ಜ್ಞಾನದಿಂದಲೇ ಪರಮ (ಶ್ರೇಷ್ಠವಾದ) ಪದವನ್ನು (ಮೋಕ್ಷವನ್ನು) ಹೊಂದುತ್ತಾನೆ ಕರ್ಮದಿಂದ ಮೋಕ್ಷವಿಲ್ಲ ಆದರೂ "ರಮಣೀಯ ಚರಣಾಃ" ಇತ್ಯಾದಿ ಶ್ರುತಿವಿರೋಧ ಬರುತ್ತದ ಎಂದರ ಹೀಗೆ ಹೇಳುತ್ತಾರೆ ಶುಭೇನ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ" ಇಲ್ಲಿ ಸ್ವರ್ಗ ನಿರಯ ಶಬ್ದಗಳು ಉತ್ತಮ ನೀಚ (ಕಟ್ಟ) ಜನ್ಮಪರವೆಂದು ತಿಳಿಯಬೇಕು ಹೀಗಿದ್ದರೂ ಯಜ್ಞಾದಿ ಶುಭಕರ್ಮಗಳನ್ನು ಮಾಡುವವರು ಉತ್ತಮವಾದ ಯೋನಿಯನ್ನು ಹೊಂದುತ್ತಾರೆ ದುಷ್ಟಕರ್ಮಗಳನ್ನು ಮಾಡುವವರು ನೀಚಯೋನಿಯನ್ನು ಹೊಂದುತ್ತಾರೆ ಆದ್ದರಿಂದ ಚರಣಶಬ್ದದಿಂದ ಕರ್ಮವನ್ನು ಉಪಲಕ್ಷಣತಯಾ. ವಾಚಕತಯಾ ಹೇಳಿರುವುದು ಕೂಡುತ್ತದೆ ಆದ್ದರಿಂದ ವಿರೋಧವಿಲ್ಲವೆಂದು ತಿಳಿಯಬೇಕು

ಓಂ ಅನಿಷ್ಟಾದಿ ಕಾರಿಣಾಮಪಿ ಚ ಶ್ರುತಮ್ ಓಂ" ಈ ಅಧಿಕರಣದ ತಾತ್ಪರ್ಯವನ್ನು "ಕರ್ಮಣಾ ಸ್ವರ್ಗಮ್" ಪದದಿಂದ ಸಂಗ್ರಹಿಸಿದ್ದಾರ ಇಲ್ಲಿ ಸ್ವರ್ಗ ಶಬ್ದದಿಂದ ಗಮನಾಗಮನಗಳು ಹೇಳಲ್ಪಟ್ಟಿವೆ ಹೀಗಿದ್ದರೂ 'ಅಶುಭಕೃತೋಽ ಶುಭಮನುಭೂಯ ಆವರ್ತಂತೇ' ಈ ಶ್ರುತಿಯಿಂದ ಅನಿಷ್ಟಾದಿ ಪಾಪಕರ್ಮಿಗಳೂ ಕೂಡ ಪಾಪಕರ್ಮಗಳಿಂದ ಗಮನಾಗಮನವನ್ನು ಹೊಂದುತ್ತಾರ ಕೇವಲ ಅದು ಮಾತ್ರವಲ್ಲ ಅಧಿಕವಾದ ದುಃಖವನ್ನು ಕೂಡ ಹೊಂದುತ್ತಾರ ಇದನ್ನು ಪ್ರತಿಪಾದಿಸಲು ಸಂಯಮನೇ" ಎಂಬ ಸೂತ್ರ ಹೊರಟಿದೆ ಅದರ ತಾತ್ಪರ್ಯವನ್ನು ಹೇಳುತ್ತಾರೆ ನಿರಯಂ ಚ" ನಿರಯ ಶಬ್ದವು ಯಮಶಾಸನವನ್ನು, ನಿತ್ಯನರಕವನ್ನು ಹೇಳುತ್ತದ ಇದು ಉಪಲಕ್ಷಣವೆಂದು ತಿಳಿಯಬೇಕು ಆರೋಹ ಎಂದರ ನರಕದಿಂದ ಉತ್ಥಾನವನ್ನು ಕೂಡ ತೆಗೆದುಕೊಳ್ಳಬೇಕು ನಂತರ "ತೇಽಶುಭಕೃತಃ" ಈ ಶ್ರುತಿಯಿಂದ 'ವಿಕರ್ಮಣಾ' ಸತ್ಕರ್ಮ ಮಾಡದಿರುವುದರಿಂದ, ನಿಷಿದ್ಧಕರ್ಮಗಳನ್ನು ಮಾಡುವುದರಿಂದ ನರಕವನ್ನು ಹೊಂದುತ್ತಾನೆ. ಅದಾದ ಮೇಲೆ ಯಾವನೊಬ್ಬನು ಉತ್ಥಾನವನ್ನು ಹೊಂದುತ್ತಾನೆ ಯಾವನೊಬ್ಬನು ನರಕವನ್ನು ಹೊಂದುತ್ತಾನೆ ಎಂಬ ಸೂತ್ರಾರ್ಥವು ಕೂಡುತ್ತದ

'ಓಂ ಅಪಿಸಪ್ತ ಓಂ" ಈ ಅಧಿಕರಣದ ತಾತ್ಪರ್ಯವನ್ನು "ನಿರಯಂಚ" ಪದದಿಂದ ಹೇಳುತ್ತಾರೆ ಇಲ್ಲಿ ನಿರಯ ಶಬ್ದವು ನಿತ್ಯ ಅನಿತ್ಯ ನರಕಪರವಾಗಿರುತ್ತದೆ ಆದರೂ ಕೂಡ 'ರೌರವೋಽಥಮಹಾಂಶ್ಚೈವ" ಇತ್ಯಾದಿ ಸ್ಮೃತಿಗಳಿಗನುಸಾರವಾಗಿ ವಿಭಾಗದಿಂದ ನಿತ್ಯ, ಅನಿತ್ಯನರಕಗಳಿರುವುದು ಸಂಭಾವಿತವಾದ್ದರಿಂದ ನಿತ್ಯನರ ಕೋಕ್ತಿಯು ಸಂಭಾವಿತವೆಂದು ತಿಳಿಯಬೇಕು

'ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ" ಈ ಅಧಿಕರಣದ ಮಥಿತಾರ್ಥವನ್ನು "ನಿರಯಂಚ" ಪದದಿಂದ ಸಂಗ್ರಹಿಸಿದ್ದಾರೆ ಶ್ರುತಿ ಸ್ಮೃತಿಗಳಲ್ಲಿ

ಹೇಳಿದ ಕರ್ಮಗಳನ್ನು ಬಿಟ್ಟು ವಿರುದ್ಧಕರ್ಮಗಳಿಂದ ನರಕವು ಪ್ರಾಪ್ತಿಯಾಗುತ್ತದೆ ಭಗವಂತನಿಗೆ ದುಃಖಪ್ರಾಪ್ತಿಯು ಇಲ್ಲವೇ ಇಲ್ಲ ಸ್ಥಿತಿ ವಿಫಲತ್ವವೂ ಇಲ್ಲ ಸ್ಥಿತಿ ವೈಫಲ್ಯ ಉಂಟುಮಾಡುವ ಕರ್ಮಗಳಿಲ್ಲದಿರುವುದರಿಂದ ಭಗವಂತನು ನರಕದಲ್ಲಿದ್ದರೂ ಕೂಡ ಅವನಿಗೆ ದುಃಖ ಭೋಗಾದಿಗಳಿಲ್ಲ" ಈ ಪ್ರಮಾಣಾನುಸಾರ ದುಃಖಾದಿಗಳಿಲ್ಲದೇ ನಿಯಮನಾರ್ಥವಾಗಿ ಭಗವಂತನ ಇರುವಿಕೆಯು ಅಲ್ಲಿ ಕೂಡುತ್ತದೆಂದು ಭಾವ

ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ' ಈ ಅಧಿಕರಣದ ತಾತ್ಪರ್ಯವನ್ನು ಶುಭೇನಕರ್ಮಣಾ ಸ್ವರ್ಗಂ ಜ್ಞಾನೇ ನೈವ ಪರಂ ಪದಮ್' ಎಂಬ ಪದಗಳಿಂದ ಸಂಗ್ರಹಿಸಿದ್ದಾರೆ ಶುಭಕರ್ಮಗಳಿಂದ ಸ್ವರ್ಗಪ್ರಾಪ್ತಿ - ಜ್ಞಾನದಿಂದಲೇ ಮೋಕ್ಷಪ್ರಾಪ್ತಿ ಹೀಗಿದ್ದರೂ ಯಾವ ಕಾರಣದಿಂದ ಕರ್ಮಗಳಿಂದ ಸ್ವರ್ಗ, ಜ್ಞಾನದಿಂದ ಮೋಕ್ಷಹೊಂದುತ್ತಾನೆಯೋ ಆ ಕಾರಣದಿಂದ ತಯೋಃ" ಶ್ರುತಿಯಲ್ಲಿ ತತ್' ಶಬ್ದದಿಂದ, ಯಾರು ಅರಣ್ಯದಲ್ಲಿ ಶ್ರದ್ಧೆಯಿಂದ ತಪಸ್ಸನ್ನು ಮಾಡಿ ಭಗವಂತನನ್ನು ಉಪಾಸಿಸುವರೋ ಯಾರು ಗ್ರಾಮದಲ್ಲಿ ಇಷ್ಟಾಪೂರ್ತಿಗಳನ್ನು ಮಾಡಿ ಭಗವಂತನನ್ನು ಉಪಾಸಿಸುವರೋ ಹೀಗೆ ವಿದ್ಯಾಕರ್ಮಮಾರ್ಗಗಳು ಪ್ರಕೃತವಾಗಿರುವುದರಿಂದ ಆ ಪರಾಮರ್ಶೆಯು ಕೂಡುತ್ತದೆಂದು ಭಾವವು

'ಓಂ ನ ತೃತೀಯೇ ತಥೋಪಲಬ್ಧೇಃ ಓಂ" ಈ ಅಧಿಕರಣದ ತಾತ್ಪರ್ಯವನ್ನು 'ಮಿಥ್ಯಾಜ್ಞಾನೇನಚ" ಪದದಿಂದ ಸಂಗ್ರಹಿಸಿದ್ದಾರೆ ಮಿಥ್ಯಾಜ್ಞಾನದಿಂದ (ಅಯಥಾರ್ಥ ಜ್ಞಾನದಿಂದ) ಮತ್ತು ವಿರುದ್ಧಕರ್ಮಗಳಿಂದ ತಮಸ್ಸಾಗುತ್ತದೆ ಸುಖಉಂಟಾಗುವದೇ ಇಲ್ಲ 'ಕೇವಲಂ ಹ್ಯೇವಾತ್ರ ದುಃಖಂ ಭವತಿ" ಶ್ರುತಿಯು ತಿಳಿಸುವಂತ ಕೇವಲ ದುಃಖರೂಪವಾದ ತಮಸ್ಸನ್ನು ಹೊಂದುತ್ತಾರೆ

"ಓಂ ತತ್‌ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ" ಈ ಅಧಿಕರಣ ಪಂಚಕಗಳ ಅಭಿಪ್ರಾಯ ಸ್ಪಷ್ಟವಾಗಿರುವುದರಿಂದ ಪಾದಾರ್ಥವನ್ನು ಉಪಸಂಹರಿಸುತ್ತಾರೆ 'ತಸ್ಮಾತ್" ಎಂಬುದಾಗಿ ಯಾವ ಕಾರಣದಿಂದ ಕಾಮ್ಯ ಕರ್ಮ ವಿರುದ್ಧಕರ್ಮ ಆಚರಿಸುವವರಿಗೆ, ಅಯಥಾರ್ಥಜ್ಞಾನವುಳ್ಳವರಿಗೆ ನಿತ್ಯಾನಿತ್ಯ ನರಕಗಳು ಉಂಟಾಗುವವೋ, ಆ ಕಾರಣದಿಂದ ಜಿಜ್ಞಾಸುವು ವಿರಕ್ತನಾಗಿ ಅಶುಭಕರ್ಮ, ವಿರುದ್ಧಕರ್ಮಗಳನ್ನು ಮಾಡದೇ ಇರಬೇಕು ಅಯಥಾರ್ಥಜ್ಞಾನವನ್ನು ಹೊಂದದೇ, ಭಗವಂತನಲ್ಲಿ ಭಕ್ತಿಪೂರ್ವಕ ಉಪಾಸನೆಯನ್ನು ಮಾಡುತ್ತ ಯಥಾರ್ಥಜ್ಞಾನವನ್ನೇ ಸಂಪಾದಿಸಬೇಕು

**ಅಣುಭಾಷ್ಯ ವಿವರಣೆಯಲ್ಲಿ**

**॥ ತೃತೀಯಾಧ್ಯಾಯದ ಪ್ರಥಮ ಪಾದವು ಮುಗಿದುದು ॥**

ಸರ್ವಾವಸ್ಥಾ ಪ್ರೇರಕಶ್ಚ ಸರ್ವರೂಪೇಷ್ವಭೇದವಾನ್ ॥ ೨ ॥
ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ ।
ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ॥ ೩ ॥

ಭಕ್ತಿಪಾದದ ಕೆಲವು ಅಧಿಕರಣಗಳ ತಾತ್ಪರ್ಯವನ್ನು "ಸರ್ವಾವಸ್ಥಾ" ಶಬ್ದದಿಂದ ತಿಳಿಸಿದ್ದಾರೆ ಇಲ್ಲಿ 'ಪ್ರೇರಕ ಇದು ಸೃಷ್ಟ್ಯಾದಿ ಉಪಲಕ್ಷಣವಾಗಿದೆ ಸರ್ವಾವಸ್ಥಾ ಶಬ್ದದಿಂದ ಸ್ವಪ್ನ ಮರೆಯಾಗುವಿಕೆ ಜಾಗ್ರತ ಸುಪ್ತಿ, ಎಚ್ಚರಿಸುವಿಕೆ, ಮೋಹಾವಸ್ಥೆಗಳು ಹೇಳಲ್ಪಡುತ್ತವೆ ಇಲ್ಲಿ ಸ್ವಪ್ನಾವಸ್ಥಾಪ್ರೇರಕ ಎಂಬುವದರಿಂದ "ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ" ಈ ಅಧಿಕರಣದ ತಾತ್ಪರ್ಯವು ಹೇಳಲ್ಪಟ್ಟಿತು ಸ್ವಪ್ನವನ್ನು ಮರೆಮಾಡುವವ ಎಂದು ಹೇಳುವುದರಿಂದ ಓಂ ಪರಾಭಿಧ್ಯಾನಾತ್ತುತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ" ಅಧಿಕರಣಾರ್ಥವು ಹೇಳಲ್ಪಟ್ಟಿತು ಸುಪ್ತಿ ಅವಸ್ಥಾ ಪ್ರೇರಕ ಎಂಬುವದರಿಂದ 'ಓಂ ತದಭಾವೋ ನಾಡೀಷು ತತ್ ಶ್ರುತೇರಾತ್ಮನಿಹ ಓಂ" ಈ ಅಧಿಕರಣದ ತಾತ್ಪರ್ಯವೂ, ಸುಪ್ತಿಯಿಂದ ಎಚ್ಚರಿಸುವವ ಎಂದು ಹೇಳುವುದರಿಂದ ಓಂ ಅತಃ ಪ್ರಬೋಧೋಽಸ್ಮಾತ್ ಓಂ' ಅಧಿಕರಣದ ಅರ್ಥವು ಹೇಳಲ್ಪಟ್ಟಿತು "ಓಂ ಸ ಏವ ಚ ಕರ್ಮಾನುಸ್ಮೃತಿ ಶಬ್ದವಿಧಿಭ್ಯಃ ಓಂ' ಅಧಿಕರಣದ ತಾತ್ಪರ್ಯವನ್ನು ಸರ್ವಾವಸ್ಥಾ" ಶಬ್ದದಿಂದ ಸಂಗ್ರಹಿಸಿದ್ದಾರೆ

ಎಲ್ಲ ಜೀವರ ಸಂಬಂಧಿಯಾದ ಅವಸ್ಥೆಗಳಿಗೆ "ಸರ್ವಾವಸ್ಥಾ" ಎಂದು ತಿಳಿಯಬೇಕು ಸರ್ವದೇಶೇಷು ಎಂಬಲ್ಲಿಯೂ ಇದನ್ನೇ ತಿಳಿಯಬೇಕು ಹೀಗೆ ಚಿತ್ತಿಉಪನಿಷತ್ತಿನ ಪ್ರಮಾಣಾನುಸಾರವಾಗಿ ಏಕಃ ಸಃ ಶಬ್ದಗಳಿಂದ ಪರಮೇಶ್ವರಃ ಎಂಬುದು ವ್ಯಾಖ್ಯಾತವಾಯಿತು ಹೀಗಿದ್ದರೂ 'ಪ್ರದರ್ಶಕಸ್ತು ಸರ್ವೇಷಾಮ್" ಇತ್ಯಾದಿ ಪ್ರಮಾಣಾನುಸಾರವಾಗಿ ಆ ಪರಮೇಶ್ವರನೊಬ್ಬನೇ ಎಲ್ಲ ದೇಶಗಳಲ್ಲಿ ಎಲ್ಲ ಕಾಲಗಳಲ್ಲಿ ಎಲ್ಲ ಅವಸ್ಥೆಗಳ ಪ್ರೇರಕನಾಗಿದ್ದಾನೆಂದು ತಿಳಿಯಬೇಕು

ಮೋಹಾವಸ್ಥೆಯಲ್ಲಿಯೂ ಅವನೇ ಪ್ರೇರಕನೆಂಬುದನ್ನು 'ಓಂ ಮುಗ್ಧೇಽರ್ಧ ಸಂಪತ್ತಿಃ ಪರಿಶೇಷಾತ್ ಓಂ" ಎಂಬ ಅಧಿಕರಣದಿಂದ ಸಂಗ್ರಹಿಸಲಾಗಿದೆ

"ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರಹಿ ಓಂ" ಅಧಿಕರಣಾರ್ಥವನ್ನು ಸರ್ವರೂಪೇಷ್ವಭೇದವಾನ್' ಎಂಬ ಪದದಿಂದ ಸಂಗ್ರಹಿಸಿದ್ದಾರೆ ಎಲ್ಲ ದೇಶಗಳಲ್ಲಿ, ಎಲ್ಲ ಗತಿಸಿದ ಕಾಲಗಳಲ್ಲಿ ಎಲ್ಲ ರೂಪಗಳಲ್ಲಿ ಅಭೇದವುಳ್ಳವನೆಂದು ಅರ್ಥವು ಹೀಗೆ ಎಂಟು ಅಧಿಕರಣಗಳ ತಾತ್ಪರ್ಯವನ್ನು ಹೇಳಿ ಈಗ 'ಓಂ ಅನೇನ ಸರ್ವಗತತ್ವಮಾಯಾಮಯ ಶಬ್ದಾದಿಭ್ಯಃ ಓಂ" ಅಧಿಕರಣದ ತಾತ್ಪರ್ಯವನ್ನು "ಸರ್ವದೇಶೇಷು ಕಾಲೇಷು" ಪದಗಳಿಂದ ಸಂಗ್ರಹಿಸಿದ್ದಾರೆ

ಎಲ್ಲ ವಸ್ತುಗಳ ಸೃಷ್ಟ್ಯಾದಿಗಳನ್ನು ಮಾಡುವವನು ಎಂದರ್ಥವು ಎಲ್ಲ ದೇಶ ಕಾಲಗಳಲ್ಲಿ ಎಲ್ಲ ವಸ್ತುಗಳ ಸೃಷ್ಟ್ಯಾದಿಕರ್ತನು ಭಗವಂತನೊಬ್ಬನೇ

ಬೇರೊಬ್ಬರಲ್ಲ ಎಂದೇಕ ಹೇಳಬೇಕು ? ಎಂದರ ಹೇಳುತ್ತಾರ ಸರ್ವೇತಿ" ವರ್ತತೇ ಅವನೊಬ್ಬನೇ ಇರುತ್ತಾನೆಂಬುದನ್ನು ಅನ್ವಯಿಸಿಕೊಳ್ಳಬೇಕು ಹಾಗಯೇ ಏಷಸರ್ವ ಏಷ ಸರ್ವಗತಃ' ಇತ್ಯಾದಿ ಶ್ರುತಿಗಳಲ್ಲಿ ಭಗವಂತನೊಬ್ಬನಿಗೆ ಮಾತ್ರ ಸರ್ವಗತತ್ವವು ಹೇಳಲ್ಪಟ್ಟಿದೆ ಭಗವಂತನ ಸರ್ವಗತತ್ವವು ಸೃಷ್ಟ್ಯಾದಿಗಳನ್ನು ಮಾಡುವ ಸಲುವಾಗಿಯೇ ಎಂದು ತಿಳಿಯಬೇಕು ಇದು ಅನುಪ್ರವಿಶ್ಯ ನಾಮರೂಪೇ ವ್ಯಾಕರೋತ್" ಶ್ರುತಿಯಿಂದ ತಿಳಿಯುತ್ತದೆ ಸೃಷ್ಟಿಯನಂತರ ಭಗವಂತನು ಆಯಾ ವಸ್ತುಗಳಲ್ಲಿ ಪ್ರವೇಶಿಸಿ ಅವುಗಳಿಗ ನಾಮರೂಪಾದಿಗಳನ್ನು ತಂದುಕೊಟ್ಟನು ಇದು ಜೀವರಿಗ ಅನ್ವಯಿಸುವುದಿಲ್ಲ ಜೀವರು ಸಾರ್ವಕಾಲಿಕವಾಗಿದ್ದರೂ ಎಲ್ಲ ದೇಶಗಳಲ್ಲಿ ಇರುವುದು ಸಾಧ್ಯವಿಲ್ಲದಿರುವುದೇ ಇದಕ್ಕ ಕಾರಣ

"ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ ಸಾಮಂಜಸ್ಯಾದೇವಮ್ ಓಂ" ಈ ಅಧಿಕರಣದ ತಾತ್ಪರ್ಯವನ್ನು ತದ್ಭಕ್ತಿತಾರತಮ್ಯೇನ' ಪದದಿಂದ ಸಂಗ್ರಹಿಸಿದ್ದಾರೆ ಅನುವ್ಯಾಖ್ಯಾನದ ಉತ್ತರಾರ್ಧವಲ್ಲಿ ತಿಳಿಸಿದಂತ (ಬ್ರಹ್ಮಾದೀನಾಂ ಚ ಸರ್ವೇಷಾಂ ಆನಂದಾದೇರ್ಯಥಾಕ್ರಮಮ್) ಬ್ರಹ್ಮಾದಿಗಳ ಮತ್ತು ಎಲ್ಲ ಇತರ ಜೀವರ ಆನಂದಾದಿಗಳಲ್ಲಿ ತಾರತಮ್ಯವಿದ್ದೇ ಇದ ಈ ಅನುವ್ಯಾಖ್ಯಾನದ ಉತ್ತರಾರ್ಧ ಶ್ಲೋಕವನ್ನು ಗಣನಗೆ ತೆಗೆದುಕೊಳ್ಳದಿದ್ದರ ಇದರ ಅರ್ಥವು ಪರಿಪೂರ್ಣವಾಗುವದಿಲ್ಲ ಬ್ರಹ್ಮಾದಿಗಳ ಮತ್ತು ನಮ್ಮೆಲ್ಲರ ಆನಂದದ ತಾರತಮ್ಯವು ಯಥಾಕ್ರಮವಾಗಿ ಮುಕ್ತಿಪರ್ಯಂತ ಭಗವಂತನಲ್ಲಿ ಭಕ್ತಿತಾರತಮ್ಯದಿಂದ ಆಗುತ್ತದೆಂದು ತಿಳಿಯಬೇಕು

**ಅಣುಭಾಷ್ಯ ವಿವರಣೆಯಲ್ಲಿ**
**॥ ತೃತೀಯಾಧ್ಯಾಯದ ದ್ವಿತೀಯ ಪಾದವು ಮುಗಿದುದು ॥**

**ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಸ್ತು ಸುರೇಶ್ವರೈಃ ।**
**ಯಥಾಕ್ರಮಂ ಬಹುಗುಣೈಃ ಬ್ರಹ್ಮಣಾತ್ವಖಿಲೈರ್ಗುಣೈಃ ॥ ೪ ॥**
**ಉಪಾಸ್ಯಃ ಸರ್ವವೇದೈಶ್ಚ ಸರ್ವೈರಪಿ ಯಥಾಬಲಮ್ ।**
**ಜ್ಞೇಯೋ ವಿಷ್ಣುರ್ವಿಶೇಷಸ್ತು ಜ್ಞಾನೇಸ್ಯಾದುತ್ತರೋತ್ತರಮ್ ॥ ೫ ॥**

ಉಪಾಸನಾಪಾದದ ಅರ್ಥವನ್ನು 'ಸಚ್ಚಿದಾನಂದ" ಎಂಬುದಾಗಿ ಸಂಕ್ಷೇಪವಾಗಿ ಸಂಗ್ರಹಿಸಿದ್ದಾರೆ "ಆನಂದಾದಯಃ ಪ್ರಧಾನಸ್ಯ" ಈ ಅಧಿಕರಣಾರ್ಥವನ್ನು "ಸದಿತಿ" ಎಂದಾಗಿ ಸಂಗ್ರಹಿಸಿದ್ದಾರೆ "ಎಲ್ಲವೇದಗಳಿಂದ" ಎಂಬುದನ್ನು ಇಲ್ಲಿ ಕೂಡ ಅನ್ವಯಿಸಿಕೊಳ್ಳಬೇಕು ಎಲ್ಲವೇದಗಳಲ್ಲಿ ಹೇಳಲ್ಪಟ್ಟ ರೀತಿಯಿಂದ ಸತ್ ಚಿತ್, ಆನಂದ, ಆತ್ಮಾ ಎಂಬುದಾಗಿ ನಾಲ್ಕು ಗುಣಗಳಿಂದ ಮನುಷ್ಯಾಧಿಕಾರಿಗಳಿಂದ ವಿಷ್ಣುವು ಉಪಾಸ್ಯನಾಗಿದ್ದಾನೆ "ಸತ್" ಇದು ಭಗವಂತನ ನಿರ್ದೋಷತ್ವವನ್ನು ಹೇಳುತ್ತದೆ ಅದು ಜ್ಞಾನ, ಆನಂದಾದಿಗಳಲ್ಲಿ ಮತ್ತು ಮುಕ್ತಿಯಲ್ಲಿ ಎಲ್ಲರಿಂದ ಅಪೇಕ್ಷಿತ

ಫಲಪ್ರಾಪ್ತಿರಿಂದ ಸಚ್ಚಿದಾನಂದ ಎಂಬುದಾಗಿ ಭಗವಂತನು ಉಪಾಸ್ಯನಾಗಿದ್ದಾನೆ "ಆತ್ಮಾ" ಎಂಬುದು ಭಗವಂತನ ಸ್ವಾಮಿತ್ವ''ವನ್ನು ತಿಳಿಸಿಕೊಡುವುದರಿಂದ ಭಗವಂತನನ್ನು "ಸ್ವಾಮೀ" ಎಂಬುದಾಗಿ ಸ್ಮರಿಸುವದು ಅವನ ಪ್ರೀತಿಗೆ ಕಾರಣವಾಗುವುದರಿಂದ ಆತ್ಮಾ'' ಎಂಬುದಾಗಿ ಕೂಡ ಉಪಾಸನ ಮಾಡಬೇಕು ಎಂದು ತಿಳಿಯತಕ್ಕದ್ದು

'ಓಂ ಇತರೇತ್ವರ್ಥಸಾಮಾನ್ಯಾತ್ ಓಂ' ಈ ಅಧಿಕರಣಾರ್ಥವನ್ನು "ಸುರೇಶ್ವರೈಃ" ಎಂಬ ಪದದಿಂದ ಸಂಗ್ರಹಿಸಿದ್ದಾರೆ ದೇವತೆಗಳಿಂದ ಯಥಾಕ್ರಮವಾಗಿ ತಾರತಮ್ಯವನ್ನು ಅತಿಕ್ರಮಿಸದೇ ವಿಷ್ಣುವು ಬಹುಗುಣಗಳಿಂದ ಉಪಾಸ್ಯನಾಗಿದ್ದಾನ ಇಲ್ಲಿ ಉಪಾಸನಾದಿ ವಿಶೇಷಗಳನ್ನು ಭಾಷ್ಯಾದಿಗಳಲ್ಲಿ ನೋಡಿ ತಿಳಿಯತಕ್ಕದ್ದು ಇಲ್ಲಿ ಸಂಕೋಚವಾಗಿ ಹೇಳಿದೆಯೆಂದು ಭಾವವು

"ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ'' ಅಧಿಕರಣದ ತಾತ್ಪರ್ಯವನ್ನು "ಬ್ರಹ್ಮಣಾತು'' ಶಬ್ದದಿಂದ ಸಂಗ್ರಹಿಸಿದ್ದಾರೆ ಗುಣಗಳಿಂದ ಎಂಬುದು ಉಪಲಕ್ಷಣವು ರೂಪಾದಿಗಳಿಂದ ಕೂಡ ಎಂದು ತಿಳಿಯಬೇಕು

ಎಲ್ಲ ವೇದಗಳಲ್ಲಿ ಉಕ್ತವಾದ ರೀತಿಯಿಂದ ಎಲ್ಲ ಗುಣ ರೂಪ, ಕ್ರಿಯಾದಿಗಳಿಂದ ಬ್ರಹ್ಮದೇವರಿಂದ ವಿಶೇಷವಾಗಿ ಭಗವಂತನು ಉಪಾಸ್ಯನಾಗಿದ್ದಾನೆ "ಸರ್ವವೇದಾಂತ ಪ್ರತ್ಯಯಮ್'' ಅಧಿಕರಣದ ತಾತ್ಪರ್ಯವನ್ನು 'ಸರ್ವೈರಪಿ' ಎಂಬುದಾಗಿ ಸಂಗ್ರಹಿಸಿದ್ದಾರೆ ಎಲ್ಲ– ಅಧಿಕಾರಿಗಳಿಂದ ಅವರವರ ಶಕ್ತಿಯನ್ನು ಅತಿಕ್ರಮಿಸದೇ (ಸ್ವಶಕ್ತ್ಯಾನುಸಾರ) ಎಲ್ಲ ವೇದಗಳಿಂದ ಮೇಲೆ ಹೇಳಿದ ರೀತಿಯಿಂದ ವಿಷ್ಣುವು ತಿಳಿಯಲ್ಪಡುತ್ತಾನೆ

ಪ್ರಜ್ಞಾಂತರ ಪೃಥಗ್'' ಅಧಿಕರಣದ ತಾತ್ಪರ್ಯವನ್ನು "ವಿಶೇಷಸ್ತು' ಎಂಬುದಾಗಿ ಸಂಗ್ರಹಿಸಿದ್ದಾರೆ ಉತ್ತರೋತ್ತರ (ತಮಗಿಂತ ಹೆಚ್ಚು ಹೆಚ್ಚಿನ) ದೇವತೆಗಳ ತಾರತಮ್ಯಾನುಗುಣವಾಗಿ ಪರೋಕ್ಷಜ್ಞಾನ ಅಪರೋಕ್ಷಜ್ಞಾನಗಳಲ್ಲಿ ವಿಶೇಷವಾದ ತಾರತಮ್ಯವು ಉಂಟೆಂದು ತಿಳಿಯಲೇಬೇಕು

**ಅಣುಭಾಷ್ಯ ವಿವರಣೆಯಲ್ಲಿ**
**॥ ತೃತೀಯಾಧ್ಯಾಯದ ತೃತೀಯ ಪಾದವು ಮುಗಿದುದು ॥**

**ಸರ್ವೇಽಪಿ ಪುರುಷಾರ್ಥಾಸ್ಸ್ಯುರ್ಜ್ಞಾನಾದೇವ ನ ಸಂಶಯಃ ।**
**ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥ ೬ ॥**
**ಗುಣ ದೋಷೈಸ್ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ ।**
**ನೃಣಾಂಸುರಾಣಾಂ ಮುಕ್ತೌತು ಸುಖಂ ಕ್ಲೃಪ್ತಂ ಯಥಾಕ್ರಮಮ್ ॥ ೭ ॥**

ಎಲ್ಲ ಅಧಿಕರಣಗಳ ಅರ್ಥವನ್ನು ಭಾಷ್ಯಾದಿಗಳಲ್ಲಿ ನೋಡತಕ್ಕದ್ದು ಈ ಅಭಿಪ್ರಾಯದಿಂದ "ಓಂ ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ ಓಂ''

ಈ ಅಧಿಕರಣದ ತಾತ್ಪರ್ಯವನ್ನು "ಸರ್ವೇಽಪಿ ಎಂಬುದಾಗಿ ಸಂಗ್ರಹಿಸಿದ್ದಾರ ಮೋಕ್ಷ ಸ್ವರ್ಗಾದಿ ಎಲ್ಲ ಪುರುಷಾರ್ಥಗಳು ಜ್ಞಾನದಿಂದಲೇ ಆಗುತ್ತವೆ ಇದರಲ್ಲಿ ಸಂಶಯವಿಲ್ಲ ಮುಖ್ಯವಾಗಿ ಜ್ಞಾನದಿಂದಲೇ ಮೋಕ್ಷವು ಸ್ವರ್ಗಾದಿಗಳು ಕರ್ಮಯುಕ್ತ ಜ್ಞಾನದಿಂದಲೇ ಲಭ್ಯವಾಗುತ್ತವೆ ಜ್ಞಾನವೇ ಮುಖ್ಯ, ಕರ್ಮಾದಿಗಳು ಅಮುಖ್ಯವೆಂದು ತಿಳಿಯಬೇಕು ಓಂ ಸ್ತುತಯೇ ಅನುಮತಿರ್ವಾ ಓಂ' ಶ್ರುತಿಯಲ್ಲಿ ಹೇಳಿರುವ ಜ್ಞಾನಿಯ ಯಥೇಷ್ಟ ಆಚರಣೆಯು ಹಾಗೆ ಮಾಡತಕ್ಕದ್ದೆಂದು ವಿಧಿಯಲ್ಲ ವಿಹಿತವಾದುದಲ್ಲ ಜ್ಞಾನಿಯ ಸ್ತುತಿಗಾಗಿ ಹೇಳಿದ ಜ್ಞಾನಿಯು ಮಾಡುವ ಕರ್ಮಗಳಿಗೆ ಅನುಮತಿಯನ್ನು ನೀಡಲಾಗಿದ ಎಂಬುದು ಸೂತ್ರಾರ್ಥವು

ಅಜ್ಞಾನಿಗಳ ಸತ್‌ಪ್ರವೃತ್ತಿ ಅಸತ್‌ಪ್ರವೃತ್ತಿಗಳಿಗೆ ವಿಶೇಷ ಉಂಟು ಎಂದು ತೋರುತ್ತದೆ ಅದು ಜ್ಞಾನಿಗಳಿಗೂ ಕೂಡ ಸಮಾನ ಎಂದರೆ ಹೇಳುತ್ತಾರೆ ನ ಲಿಪ್ಯತೇ ಚ ಶಬ್ದವು ಏವ ಎಂಬ ಅರ್ಥವನ್ನು ಹೇಳುತ್ತದ ಅಪರೋಕ್ಷ ಜ್ಞಾನಿಗಳಿಗೆ ಆಗಾಮಿಕರ್ಮಗಳ ಲೇಪವಾಗುವದಿಲ್ಲ

ಜ್ಞಾನವನ್ನು ಹೊಂದಿದ ಅಪರೋಕ್ಷಜ್ಞಾನಿಯು ತಾನು ಮಾಡಿದ ಪಾಪಕರ್ಮಗಳಿಂದ ಮನುಷ್ಯ ಲೋಕದಲ್ಲಿಯಾಗಲಿ, ಪರಲೋಕದಲ್ಲಿಯಾಗಲೀ ಲೇಪವನ್ನು ಹೊಂದುವುದಿಲ್ಲ ಅಶುಚಿತ್ವ, ನರಕಾದಿಗಳನ್ನು ಹೊಂದುವುದಿಲ್ಲ ಅಜ್ಞಾನಿಗಳಿಗೆ ಎಲ್ಲದೋಷಗಳ ಲೇಪಾಭಾವವು ಇಲ್ಲವೆಂದಲ್ಲ ಈ ಪ್ರಕಾರದಿಂದ ಓಂ ಕಾಮಕಾರೇಣ ಚೈಕೇ ಓಂ" ಎಂಬುದರ ಮೂಲಾರ್ಥವು ಹೇಳಲ್ಪಟ್ಟಿತು ಹೀಗೆ ಹೇಳುವುದರಿಂದ "ತದಧಿಗಮಃ" ಇದರ ಪೌನರುಕ್ತ್ಯವಿಲ್ಲ ಅಲ್ಲಿಕೂಡ ಅಪರೋಕ್ಷ ಜ್ಞಾನಾನಂತರದಲ್ಲಿ ಪಾಪಗಳ ಲೇಪವನ್ನು ಹೇಳಿಲ್ಲ ಎಂದರೆ ಅಲ್ಲಿ ಜ್ಞಾನಿಗಳಿಂದ ಮಾಡಲ್ಪಟ್ಟ ಪಾಪಗಳಿಂದ ತಮ್ಮ ಜ್ಞಾನದಫಲವು ಕುಂಠಿತವಾಗುವದಿಲ್ಲವೆಂದು ತಾತ್ಪರ್ಯವು

ಇಲ್ಲಿ ಕರ್ಮಗಳು ಪ್ರತಿಬಂಧಕವಾಗಿರುವುದರಿಂದ ಮೋಕ್ಷ ಹೇಗೆ? ಎಂಬ ಶಂಕೆಯನ್ನು ನಿವಾರಿಸುವದಕ್ಕೋಸ್ಕರ ಜ್ಞಾನದಿಂದ ಪೂರ್ವತನ ಕರ್ಮಗಳ ವಿನಾಶ ಉತ್ತರ ಕರ್ಮಗಳ ನಿರ್ಲೇಪವು ಹೇಳಲ್ಪಟ್ಟಿದೆ

ಇದನ್ನೇ ಅನುವ್ಯಾಖ್ಯಾನದಲ್ಲಿ – "ಜ್ಞಾನೋತ್ತರ ಕಾಲೀನ ಪಾಪಗಳ ಲೇಪವು ಇರುವುದಿಲ್ಲ ಅಶುಚಿತ್ವಾದಿ ದೋಷಗಳೂ ಉಂಟಾಗುವುದಿಲ್ಲ ಜ್ಞಾನವು ಬಂದಮೇಲೆ ಮುಕ್ತಿಯು ನಿಯಮೇನ ಆಗುತ್ತದೆ" ಎಂಬುದಾಗಿ ಹೇಳಲ್ಪಟ್ಟಿದೆ

ಜ್ಞಾನದಿಂದ ದೋಷಗಳ ಲೇಪವು ಆಗುವುದಿಲ್ಲವೆಂದಾದರೆ, ಅಸತ್‌ಪ್ರವೃತ್ತಿ ವಿಶೇಷ ಉಂಟೆಂದು ಒಪ್ಪಿಕೊಳ್ಳುವುದು ಹೇಗೆ? ಯಾವುದು ಇಲ್ಲಿ ಪ್ರತಿಪಾದಿತವಾಗಿದೆಯೋ ಆ ವಿಷಯದಿಂದ ಮೋಕ್ಷವು ಆಗುವುದಿಲ್ಲ.

ಓಂ ವಿದ್ಯೈವತು ನಿರ್ಧಾರಣಾತ್ ಓಂ' ಈ ಸೂತ್ರದಲ್ಲಿ ಜ್ಞಾನದಿಂದಲೇ ಮೋಕ್ಷವು ಸಾಧ್ಯವೆಂದು ಹೇಳಲ್ಪಟ್ಟಿವ ಸ್ವರ್ಗಾದಿಗಳಲ್ಲ ಪುರುಷಾರ್ಥಾಧಿಕರಣದಲ್ಲಿ ಮೋಕ್ಷವು ಜ್ಞಾನಸಾಧ್ಯವೆಂದು ಸಮರ್ಥಿಸಿರುವುದರಿಂದ ಸತ್‌ಪ್ರವೃತ್ತಿಯಲ್ಲಿ ವಿಶೇಷತ್ವವಿಲ್ಲ ಯಾವ ಜ್ಞಾನಿಗೆ ಸ್ವರ್ಗಾದಿಗಳ ಅಪೇಕ್ಷ ಇದಯೋ ಆ ಪ್ರವೃತ್ತಿಯಲ್ಲಿ ವಿಶೇಷ ಅಭಾವ ಪ್ರಸಂಗವಿರುತ್ತದೆ ಎಂದರ ಹೇಳುತ್ತಾರೆ ಗುಣದೋಷ್ಯಃ ಎಂಬುದಾಗಿ

ಇಲ್ಲಿ ಗುಣದೋಷ ಶಬ್ದಗಳಿಂದ ಸತ್‌ಪ್ರವೃತ್ತಿ ಅಸತ್‌ಪ್ರವೃತ್ತಿಗಳು ಹೇಳಲ್ಪಡುತ್ತವೆ ಜ್ಞಾನಾನಂತರದಲ್ಲಿ ಪ್ರಕೃತಿಯ ಪ್ರವೃತ್ತಿಗಳು ಎಂದರ್ಥವು ಅಪಿ ಶಬ್ದವು ಅವಧಾರಣಾರ್ಥದಲ್ಲಿ ಎಂದು ತಿಳಿಯಬೇಕು ಸತ್, ಅಸತ್ ಪ್ರವೃತ್ತಿಗಳಿಂದ ಜ್ಞಾನಿಗಳಿಂದ ಭೋಗ್ಯವಾದ ಸುಖಾದಿಗಳಲ್ಲಿ ವಿಶಿಷ್ಟಮುಕ್ತಿಯಲ್ಲಿ ವೃದ್ಧಿಹ್ರಾಸಾದಿಗಳು ಉಂಟಾಗುತ್ತವೆ ಹೀಗಿದ್ದರೂ ಜ್ಞಾನವು ಬಂದಮೇಲ ಆಗತಕ್ಕ ಅಸತ್ ಪ್ರವೃತ್ತಿಗಳಿಂದ ಮುಕ್ತಿಯಲ್ಲಿ ಹೊಂದತಕ್ಕ ಸುಖಕ್ಕ ಹ್ರಾಸವಾಗುತ್ತದ ನರಕಾದಿಗಳ ಪ್ರಾಪ್ತಿಯು ಆಗುವದಿಲ್ಲ ಸತ್‌ಪ್ರವೃತ್ತಿಗಳಿಂದ ಮುಕ್ತಿಯಲ್ಲಿ ಸುಖಕ್ಕ ವೃದ್ಧಿಯು ಆಗುತ್ತದೆ ಸ್ವರ್ಗಾದಿಗಳು ಕೂಡ ಆಗುವುದಿಲ್ಲವೆಂದಲ್ಲ ಅಲ್ಲಿಕೂಡ ದೋಷವನ್ನು ಹೇಳುತ್ತಾರೆ ಸ್ವಣಾಮ್" ಎಂದು ಗುಣ್ಯೈಃ" ಇತ್ಯಾದಿಗಳು ಅನುಸರಿಸಿ ಬರುತ್ತವೆ ಇಲ್ಲಿ ಹ್ರಾಸವೆಂದರೆ ಸುಖದ (ಅನಭಿವ್ಯಕ್ತಿ) ವ್ಯಕ್ತವಾಗದಿರುವಿಕ ಎಂದರ್ಥವು ವೃದ್ಧಿಎಂದರೆ ಸುಖದ ಅಭಿವ್ಯಕ್ತಿ ಎಂದು ತಿಳಿಯಬೇಕು

ಆವರಣಗಳಿಲ್ಲದಿರುವುದರಿಂದ ಮೋಕ್ಷದಲ್ಲಿ ಸುಖದ ಅಭಿವ್ಯಕ್ತಿ ಹೇಗೆ ಆಗುವುದಿಲ್ಲ ? ಎಂದರೆ ಆವರಣಗಳು ಎರಡು ವಿಧವಾಗಿವೆ ಮೊದಲನೆಯದು ಈಶ್ವರೇಚ್ಛಾ ರೂಪವಾದುದು ಎರಡನಯದು ಪ್ರಕೃತಿರೂಪವಾದುದು ಈ ಪ್ರಕೃತಿರೂಪ ಆವರಣವು ಮುಕ್ತಿಯಲ್ಲಿ ಇಲ್ಲವೇ ಇಲ್ಲ ಮೊದಲನೆಯದು ಇದ್ದೇ ಇರುತ್ತದೆ ಅದು ಅಪರೋಕ್ಷಜ್ಞಾನವು ಬಂದ ಮೇಲೆ ಪಾಪವನ್ನು ನಿಮಿತ್ತಮಾಡಿ ಆನಂದಾನುಭವವನ್ನು ಪ್ರತಿಬಂಧಿಸುತ್ತದೆ ಎಂದಾಗಿ ಹೇಳಿದ್ದಾರೆ 'ಅಜೇ ದ್ವೇ ಪ್ರಕೃತೀ ದುಷ್ಟೇ ಮೋಕ್ಷೇ" ಎಂದು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು

ಇದರಿಂದ ಯಾವುದನ್ನು ಮುಕ್ತಿಯಲ್ಲಿ ಅನುಭವಿಸುತ್ತಾನೋ ಅದೇ ಅವನ ಸ್ವರೂಪವೆಂಬ ಮಾತನ್ನು ನಿರಾಕರಿಸಿದಂತೆ ಆಯಿತು "ಸ್ವರೂಪಾಚ್ಛಾದಿಕವನ್ನು ನಾಶಮಾಡಿ ಪರಮಾಚ್ಛಾದಿಕವನ್ನು ಅಪಸರಣಮಾಡಿ (ದೂರಮಾಡಿ) ಪುರುಷೋತ್ತಮನಾದ ಭಗವಂತನು ಮೋಕ್ಷಪದವಿಯನ್ನು ದಯಪಾಲಿಸುತ್ತಾನೆ ಈ ಶ್ರುತಿಗೆ ಅನುಸಾರವಾಗಿ ಅಲೌಕಿಕವಾದ ಅರ್ಥವನ್ನು ಕಲ್ಪಿಸಬಹುದು

ದೇವತೆಗಳಲ್ಲಿ ಕೂಡ ಅಸತ್ ಪ್ರವೃತ್ತಿಯು ಇರುತ್ತದೆ ಹಾಗಿರುವಾಗ, ಆ ನಿಮಿತ್ತಕವಾದ ಹ್ರಾಸಾದಿಗಳನ್ನು ಸ್ವೀಕರಿಸಬೇಕು ಈ ರೀತಿ ಆಗಲಾರದು ಹೀಗೆ ಆಗುವುದಾದರೆ ಇವರು ಇವರಿಗಿಂತ ಕಡಿಮೆಯವರು ಇವರು ಇವರಿಗಿಂತ ಹೆಚ್ಚಿನವರು,

ಇವರು ಇವರಿಂದ ನಮರು ಎಂಬ ಶಾಸ್ತ್ರೀಯ ವ್ಯವಹಾರವು ಲೋಪವಾಗುವ ಪ್ರಸಂಗ ಉಂಟಾಗುತ್ತದೆ ಅಲ್ಲದೇ ಶಾಸ್ತ್ರಕ್ಕ ಅಪ್ರಾಮಾಣ್ಯ ಪ್ರಸಂಗವೂ ಬರುತ್ತದೆ

ಸ್ವರೂಪವನ್ನವೇಕ್ಷಿಸಿ ಈ ವ್ಯವಹಾರವು ಇಲ್ಲವೆಂದು ಹೇಳಬೇಕು ಹಾಗಿದ್ದರೆ ಆನಂದಾನುಭವ ತಾರತಮ್ಯವು ದೊರೆಯುವದಿಲ್ಲ ಎಂದರೆ ಹೇಳುತ್ತಾರ "ಸುರಾಣಾಮ್" ಎಂದು "ಸುರಾಣಾಮ್ ತು' ಎಂದಾಗಿ ಹೇಳುವಲ್ಲಿ "ತು' ಶಬ್ದವು ಮನುಷ್ಯಾಪೇಕ್ಷಯಾ ವಿಶೇಷವನ್ನು ತಿಳಿಸುತ್ತದ ಮುಕ್ತರಾದ ದೇವತೆಗಳಲ್ಲಿ ವಿಶೇಷಉಂಟು ಯಥಾಕ್ರಮವಾದ ತಾರತಮ್ಯವನ್ನು ಅತಿಕ್ರಮಿಸದೇ ಕ್ಲೃಪ್ತವಾದ ಸುಖವು ಅಭಿವ್ಯಕ್ತವಾಗುತ್ತದೆ ಹ್ರಾಸಾದಿಗಳು ಆಗುವುದಿಲ್ಲ ಹೀಗೆ ತಿಳಿಯಬೇಕು ಅಸತ್ ಪ್ರವೃತ್ತಿಯಿಂದ ದೇವತಗಳಿಗೆ ಮನುಷ್ಯರ ಹಾಗೆ ಮುಕ್ತಿಯಲ್ಲಿ ಸುಖಕ್ಕೆ ಹ್ರಾಸವು ಆಗುವುದಿಲ್ಲ ಹಾಗಾಗುವುದಾಗಿದ್ದರ ಆನಂದಾದಿ ಅನುಭವದಲ್ಲಿ ವ್ಯತ್ಯಾಸ ಮತ್ತು ತನ್ಮೂಲಕ ತಾರತಮ್ಯಾದಿಗಳು ಇಲ್ಲದೇ ಹೋದೀತು ಆದರೆ ಮುಕ್ತಿಯಲ್ಲಿ ದೇವತಗಳಿಗ ಯಥಾಕ್ರಮವಾದ ಸುಖವು ಕ್ಲೃಪ್ತವೇ ಆಗಿರುತ್ತದೆ ಯಾರಲ್ಲಿ ಯಾವ ಗುಣಗಳಿವೆಯೋ ಅವರ ಅಸತ್‌ಪ್ರವೃತ್ತಿಯಿಂದ ಅವರಿಗೆ ಹ್ರಾಸಾದಿಗಳು ಉಂಟಾಗುವದಿಲ್ಲ ಹಾಗಾದರ ಅವರ ಅಸತ್‌ಪ್ರವೃತ್ತಿಯಿಂದ ಅವರಿಗೆ ಏನೂ ಹಾನಿ ಇಲ್ಲವಂಬ ಪ್ರಸಂಗ ಉಂಟಾಗುತ್ತದ ಅಂದರ ಕ್ಲೃಪ್ತವಾದದ್ದು ಹಾನಿಯಾಗದಿದ್ದರೂ ಸ್ವಯೋಗ್ಯತಾ ಪೂರ್ತಿಯಾಗಲು ಎಷ್ಟು ಸಾಧನ ಅನುಷ್ಠಾನ ಮಾಡಬೇಕೋ ಅದನ್ನು ಬಿಟ್ಟು ಯೋಗ್ಯತೆಗೆ ಮೀರಿ ಅನುಷ್ಠಿತವಾದ ಸಾಧನದಿಂದ ಪ್ರಸಕ್ತವಾದ ಪರಾನಂದಾದಿಗಳು ಅಸತ್ ಪ್ರವೃತ್ತಿ ವಿಶೇಷದಿಂದ ಉಂಟಾಗುವದಿಲ್ಲ

ಅನುವ್ಯಾಖ್ಯಾನದಲ್ಲಿ ಹೀಗೆ ತಿಳಿಸಿದ್ದಾರೆ ತಮಗಿಂತ ಉತ್ತಮರಾದವರ ಹೆಂಡತಿಯರ ಸ್ವೀಕಾರದಿಂದ ಚಂದ್ರ ಸುಗ್ರೀವರಿಗೆ ಅವರು ಹೊಂದಬೇಕಾದ ಸುಖವಾಗಲೀ, ಕ್ಲೃಪ್ತವಾದ ಸುಖಕ್ಕ ಹಾನಿಯಾಗಲೀ ಆಗಲಿಲ್ಲ ಇದು ಬ್ರಹ್ಮದೇವರನ್ನು ಬಿಟ್ಟು ಇತರ ದೇವತೆಗಳ ವಿಷಯವು ಬ್ರಹ್ಮದೇವರಿಗೆ ಅಸತ್ ಪ್ರವೃತ್ತಿಗಳೇ ಇಲ್ಲದ ಪ್ರಯುಕ್ತ ಹೊಂದಬೇಕಾದ ಸುಖಕ್ಕೆ ಕೂಡ ಹಾನಿಯಾಗುವದಿಲ್ಲವೆಂದು ತಿಳಿಯಬೇಕು

**ಅಣುಭಾಷ್ಯ ವಿವರಣೆಯಲ್ಲಿ**

**॥ ತೃತೀಯಾಧ್ಯಾಯದ ಚತುರ್ಥಪಾದವು ಮುಗಿದುದು ॥**

**ವಿಷ್ಣುರ್ಬ್ರಹ್ಮ ತಥಾಽದಾತೇತ್ಯೇವಂ ನಿತ್ಯಮುಪಾಸನಮ್ ।**
**ಕಾರ್ಯಮಾಪದ್ಯಪಿ ಬ್ರಹ್ಮ ತೇನ ಯಾತ್ಯಪರೋಕ್ಷತಾಮ್ ॥ ೧ ॥**
**ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವ ಪರಿಕ್ಷಯಃ ।**
**ಅನಿಷ್ಟಸ್ಯೋಭಯಸ್ಯಾಪಿ ಸರ್ವಸ್ಯಾನ್ಯಸ್ಯ ಭೋಗತಃ ॥ ೨ ॥**

ಈ ಪಾದಾರ್ಥವನ್ನು ಸಂಕೋಚಮಾಡಿ "ವಿಷ್ಣು"ಪದದಿಂದ ಹೇಳುತ್ತಾರೆ

ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ" ಅಧಿಕರಣಾರ್ಥವನ್ನು ವಿಷ್ಣುರ್ಬ್ರಹ್ಮ' ಎಂಬುದಾಗಿ ಸಂಗ್ರಹಿಸಿದ್ದಾರ ಬ್ರಹ್ಮನು (ವಿಷ್ಣುವು) ಎಲ್ಲ ಗುಣಗಳಿಂದ ಪೂರ್ಣನು

"ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ" ಈ ಅಧಿಕರಣಾರ್ಥವನ್ನು 'ತಥಾಽಽದಾತಾ' ಶಬ್ದದಿಂದ ಸಂಗ್ರಹಿಸಿದ್ದಾರೆ ಆದಾತಾ ಎಂದರೆ 'ಸ್ವಾಮೀ" ಎಂದರ್ಥವು

"ಓಂ ಆವೃತ್ತಿರಸಕೃದುಪದೇಶಾತ್ ಓಂ" ಈ ಅಧಿಕರಣಾರ್ಥವನ್ನು 'ಇತ್ಯೇವಮ್' ಎಂಬುದಾಗಿ ತಿಳಿಸಿದ್ದಾರೆ ಹಿಂದೆ ಹೇಳಿದ ಉಪಾಸನೆಯನ್ನು ಆಪತ್ತಿನಲ್ಲಿ. ವ್ಯಾಧಿಗಳುಂಟಾದಆಪತ್ಕಾಲದಲ್ಲಿಕೂಡ ಮಾಡಬೇಕು ವಿಷ್ಣೂಪಾಸನೆಯನ್ನು ಆದರಪೂರ್ವಕವಾಗಿ ನಿರಂತರವಾಗಿ ಮಾಡಬೇಕಾದುದು ಅವಶ್ಯ ಕರ್ತವ್ಯವೆಂದು ಹೇಳಿ ಫಲವನ್ನು ಬ್ರಹ್ಮತೇನ' ಎಂಬುದಾಗಿ ತಿಳಿಸಿದ್ದಾರ ಈ ಉಪಾಸನೆಯಿಂದ ಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ

ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ' ಈ ಅಧಿಕರಣದ ತಾತ್ಪರ್ಯವನ್ನು "ಪ್ರಾರಬ್ಧಕರ್ಮಣಃ' ಎಂಬುದಾಗಿ ತಿಳಿಸಿದ್ದಾರೆ ಪ್ರಾರಬ್ಧಕರ್ಮದ ದೆಸೆಯಿಂದ ಅನ್ಯವಾದ ಅಪ್ರಾರಬ್ಧಕರ್ಮದ ಪುಣ್ಯಪಾಪಗಳೆರಡೂ ಅನಿಷ್ಟಗಳೇ ಆಗಿವೆ ಪಾಪವು ಸರ್ವಥಾ ಅನಿಷ್ಟವೇ ಕಾಮ್ಯಪುಣ್ಯವು ಕೂಡ ಎರಡು ವಿಧವಾಗಿದೆ ಇಷ್ಟ ಮತ್ತು ಅನಿಷ್ಟ ಇದರಲ್ಲಿ ಅನಿಷ್ಟವಾದಕಾಮ್ಯಪುಣ್ಯ ಪಾಪಗಳೆರಡೂ ಜ್ಞಾನದಿಂದಲೇ ನಾಶವಾಗುತ್ತವೆ

"ಓಂ ಭೋಗೇನತ್ವಿತರೇ ಕ್ಷಪಯಿತ್ವಾ ಅಥ ಸಂಪತ್ಸ್ಯತೇ ಓಂ" ಈ ಸೂತ್ರದ ಅನುವಾದವನ್ನು "ಸರ್ವನ್ಯಾನ್ಯಸ್ಯ" ಪದದಿಂದ ತಿಳಿಸಿದ್ದಾರೆ 'ಅನ್ಯಸ್ಯ' ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು ಪ್ರಾರಬ್ಧವ್ಯತಿರಿಕ್ತವಾದ ಎಲ್ಲ ಪುಣ್ಯಪಾಪ ರೂಪಪ್ರಾರಬ್ಧಕರ್ಮಗಳ ಹಾಗೆಯೇ ಅನಿಷ್ಟಕಾಮ್ಯ ವ್ಯತಿರಿಕ್ತವಾದ ಕರ್ಮಗಳ, ಇಷ್ಟಕಾಮ್ಯಗಳ ನಾಶವು ಭೋಗದಿಂದ ಆಗುತ್ತದೆ

ಇಷ್ಟಕಾಮ್ಯವು ಕೂಡ ಜ್ಞಾನದಿಂದ ನಾಶವಾಗುವುದಾದರ, ಜ್ಞಾನವು ಇಷ್ಟ ಫಲವನ್ನು ನಾಶಮಾಡುವ ಪ್ರಸಂಗವು ಬರುವುದರಿಂದ ಪುರುಷಾರ್ಥವೆನಿಸದೇ-ಹೋದಿತು ಪ್ರಾರಬ್ಧವು ಜ್ಞಾನದಿಂದ ನಾಶವಾದರೆ ಜ್ಞಾನಿಗಳು ಮಾಡಿದ ಬ್ರಹ್ಮೋಪದೇಶಗಳು ಗಾಳಿ ಮಾತೇ ಆದಾವು ಜ್ಞಾನಿಗಳಿಗೆ ಪೂರ್ವಪುಣ್ಯವು ಜ್ಞಾನ ಹೇತುವಾಗಿಯೂ ನಂತರದ ಪುಣ್ಯವು ಮುಕ್ತಿಯ ಅನುಪ್ರವೇಶಕ್ಕೆ ಕಾರಣವಾಗುತ್ತದೆಂದು ತಿಳಿಯಬೇಕು.

**ಅಣುಭಾಷ್ಯ ವಿವರಣೆಯಲ್ಲಿ**

**॥ ಚತುರ್ಥಾಧ್ಯಾಯದ ಪ್ರಥಮ ಪಾದವು ಮುಗಿದುದು ॥**

ಉತ್ತರೇಷೂತ್ತರೇಷ್ವೇವಂ ಯಾವದ್ವಾಯುಂ ವಿಮುಕ್ತಿಗಾಃ ।
ಪ್ರವಿಶ್ಯ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ ॥ ೩ ॥
ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಾಂಶ್ಚೈವೋತ್ತರೋತ್ತರಮ್ ।
ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ ದೇಹಕ್ಷಯಾತ್ಸುರಾಃ ॥ ೪ ॥

ಈ ಪಾದದ ಅರ್ಥವನ್ನು 'ಉತ್ತರೇಷು'' ಇತ್ಯಾದಿ ಪದಗಳಿಂದ ಸಂಗ್ರಹಿಸಿದ್ದಾರೆ "ಓಂ ವಾಙ್ಮನಸಿ ದರ್ಶನಾತ್ ಶಬ್ದಾಚ್ಚ ಓಂ'' ಈ ಅಧಿಕರಣದ ತಾತ್ಪರ್ಯವನ್ನು ಉತ್ತರೇಷೂತ್ತರೇಷು'' ಪದದಿಂದ ತಿಳಿಸಿದ್ದಾರೆ ವಿಶಿಷ್ಟ ಮುಕ್ತಿಯನ್ನು ಕುರಿತು ಹೋಗುವ ಅವರರಾದ ದೇವತೆಗಳು ತಮ್ಮ ಬಿಂಬಭೂತರಾದ ಉತ್ತಮರಾದ ಭೂತಾಭಿಮಾನಿಗಳಲ್ಲಿ ಲಯಹೊಂದಿ ನಂತರ ಅವರನ್ನು ಪ್ರವೇಶಿಸಿ ಅವರು ತಮಗಿಂತ ಉತ್ತಮರಾದವರಲ್ಲಿ ಲಯಹೊಂದಿ ಕ್ರಮೇಣ ವಾಯುದೇವರ ವರೆಗೆ ಲಯ ಹೊಂದುತ್ತಾರೆ ವಾಯು ಎಂದರೆ ಇಲ್ಲಿ ಬ್ರಹ್ಮದೇವರು ಬ್ರಹ್ಮದೇವರ ಪರ್ಯಂತ ಉತ್ತಮರಲ್ಲಿ ಕ್ರಮಾತ್ ಲಯಹೊಂದಿ ಅವರಲ್ಲಿ ಪ್ರವೇಶಿಸಿ ಅವರೊಳಗೆ ಅಥವಾ ಸ್ವೋತ್ತಮರ ಒಳಗೆ ಅಥವಾ ಹೊರಗೆ ಇದ್ದು ಸುಖಾದಿಗಳನ್ನು ಭೋಗಿಸುತ್ತಾರೆ ಓಂ ಸೋಽಧ್ಯಕ್ಷೇ ತಮುಪಗಮಾದಿಭ್ಯಃ ಓಂ'' ಈ ಅಧಿಕರಣದ ತಾತ್ಪರ್ಯವನ್ನು ವಾಯುರ್ವಿಷ್ಣುಂ ಪ್ರವಿಶ್ಯ' ಎಂಬುದಾಗಿ ಸಂಗ್ರಹಿಸಿದ್ದಾರೆ ಬ್ರಹ್ಮದೇವರು ವಿಷ್ಣುವಿನಲ್ಲಿ ಲಯಹೊಂದಿ ಪ್ರವೇಶಿಸಿ ಭಿನ್ನವಾದ ಭೋಗಗಳನ್ನು ಭೋಗಿಸುತ್ತಾರೆ ಓಂ ಅವಿಭಾಗೋ ವಚನಾತ್ ಓಂ'' ಈ ಅಧಿಕರಣದ ತಾತ್ಪರ್ಯವನ್ನು "ಭೋಗಾಂಶ್ಚೈವೋತ್ತರೋತ್ತರಮ್'' ಎಂಬುದಾಗಿ ತಿಳಿಸಿದ್ದಾರೆ ಅವರಿಂದ ಭೋಗಿಸಲ್ಪಡುವ ಆನಂದಾದಿ ಭೋಗಗಳು. ವಿಷಯಾನುಭವಗಳು ತಾರತಮ್ಯಾನುಸಾರವಾಗಿ (ತರತಮ ಭಾವದಿಂದ) ಭಗವಂತನ ಅಧೀನವಾಗಿಯೇ ಆಗುತ್ತವೆ

ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತತ್‌ಶೇಷಗತ್ಯನು ಸ್ಮೃತಿಯೋಗಾಚ್ಚಹಾರ್ದಾನುಗೃಹೀತಃ ಶತಾಧಿಕಯಾ ಓಂ'' ಈ ಅಧಿಕರಣದ ತಾತ್ಪರ್ಯವನ್ನು 'ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ'' ಪದಗಳಿಂದ ಸಂಗ್ರಹಿಸಿದ್ದಾರೆ ಮನುಷ್ಯರು ಚರಮಶರೀರದಿಂದ (ಕೊನೆಯ ಶರೀರದಿಂದ) ಹೃದಯದ ಅಗ್ರಭಾಗವು ಪ್ರಕಾಶಿತವಾಗಿ ವಿಶಿಷ್ಟವಾದ ಉತ್ಕ್ರಮಣವನ್ನು ಹೊಂದಿ ಲಿಂಗಭಂಗರೂಪವಾದ ಮುಕ್ತಿಯನ್ನು ಹೊಂದುತ್ತಾರೆ

**ಅಣುಭಾಷ್ಯ ವಿವರಣೆಯಲ್ಲಿ**

**॥ ಚತುರ್ಥಾಧ್ಯಾಯದ ದ್ವಿತೀಯ ಪಾದವು ಮುಗಿದುದು ॥**

ಅರ್ಚಿರಾದಿ ಪಥಾವಾಯುಂ ಪ್ರಾಪ್ಯತೇನ ಜನಾರ್ದನಂ ।
ಯಾಂತ್ಯುತ್ತಮಾ ನರೋಚ್ಯಾದ್ಯಾಬ್ರಹ್ಮಲೋಕಾತ್ ಸಹಾಮುನಾ ॥ ೫ ॥

"ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ" ಇತ್ಯಾದಿ ಆರು ಅಧಿಕರಣಗಳನ್ನು 'ಅರ್ಚಿರಾದಿ ಪಥಾವಾಯುಂ' ಈ ಶಬ್ದಗಳಿಂದ ಸಂಗ್ರಹಿಸಿದ್ದಾರೆ

ಮುಕ್ತಿಯೋಗ್ಯರಾದ ಉತ್ತಮಜೀವರು ಮೊದಲು ಹೇಳಿದಂತೆ ಉತ್ಕ್ರಮಣಾನಂತರವಲ್ಲಿ ಅರ್ಚಿರಾದಿ ಮಾರ್ಗದಿಂದ ಭಾರತೀಪತಿಗಳಾದ ವಾಯುದೇವರನ್ನು ಹೊಂದಿ ಆ ವಾಯುದೇವರಿಂದ ಕೂಡಿ ಕಾರ್ಯಬ್ರಹ್ಮದೇವರನ್ನು ಹೊಂದಿ ಬ್ರಹ್ಮಲೋಕದಲ್ಲಿ ಇರುತ್ತಾರೆ ಇವರು ಪ್ರತೀಕಾಲಂಬನರೆನಿಸುತ್ತಾರೆ (ಪ್ರತೀಕದಲ್ಲಿ ಭಗವಂತನ ಉಪಾಸನೆ ಮಾಡುವವರು ಎಂದರ್ಥವು)

ಅಪ್ರತೀಕಾಲಂಬನರು (ಪ್ರಾಪ್ತೋಪಾಸಕರು) ಅರ್ಚಿರಾದಿ ಮಾರ್ಗದಿಂದ ವಾಯುದೇವರನ್ನು ಹೊಂದಿ ಅವರಿಂದ ಕೂಡಿಕೊಂಡು ಬ್ರಹ್ಮದೇವರನ್ನು ಹೊಂದಿ ಕಾರ್ಯಬ್ರಹ್ಮದೇವರ ಸಮೀಪದಲ್ಲಿ ಇರುತ್ತಾರ ಈ ಇಬ್ಬರೂ ಲಯಕಾಲದಲ್ಲಿ ಬ್ರಹ್ಮದೇವರ ಉಪದೇಶವನ್ನು ಹೊಂದಿ ಬ್ರಹ್ಮಲೋಕದಿಂದ ಹೊರಟು ಬ್ರಹ್ಮದೇವರಿಂದ ಸಹಿತರಾಗಿ ಮುಕ್ತಿಪ್ರದನಾದ ವಾಸುದೇವನನ್ನು ಹೊಂದುತ್ತಾರೆ

ಸಾಕಾಂಕ್ಷಾಣಿ ವಾಕ್ಯಾನಿ ಅರ್ಥಪ್ರತಿಪಾದಕಾನಿ ಭವಂತಿ" ನ್ಯಾಯದಂತ ಯೋಗ್ಯವಾದ ಅಧ್ಯಾಹಾರ ಮಾಡಿಕೊಂಡಾಗ ವಾಕ್ಯಗಳು ಸರಿಯಾದ ಅರ್ಥವನ್ನು ಕೊಡುತ್ತವೆ ಆದ್ದರಿಂದ ಅಧ್ಯಾಹಾರಮಾಡಿಕೊಳ್ಳುವದು ದೋಷವೆನಿಸದು

ಅಣುಭಾಷ್ಯ ವಿವರಣೆಯಲ್ಲಿ
॥ ಚತುರ್ಥಾಧ್ಯಾಯದ ತೃತೀಯ ಪಾದವು ಮುಗಿದುದು ॥

ಯಥಾಸಂಕಲ್ಪ ಭೋಗಾಂಶ್ಚ ಚಿದಾನಂದ ಶರೀರಿಣಃ ।
ಜಗತ್ಸೃಷ್ಟ್ಯಾದಿ ವಿಷಯಂ ಮಹಾಸಾಮರ್ಥ್ಯಮಪಿ ಋತೇ ॥ ೬ ॥
ಯಥೇಷ್ಟ ಶಕ್ತಿಮಂತಶ್ಚ ವಿನಾಸ್ವಾಭಾವಿಕೋತ್ತಮಾನ್ ।
ಅನನ್ಯವಶಗಾಶ್ಚೈವ ವೃದ್ಧಿಹ್ರಾಸ ವಿವರ್ಜಿತಾಃ ।
ದುಃಖಾದಿರಹಿತಾ ನಿತ್ಯಂ ಮೋದಂತೇ ಅವಿರತಂ ಸುಖಮ್ ॥ ೭ ॥
ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥ ಸಂಗ್ರಹಃ ।
ಕೃತೋಽಯಂ ಪ್ರೀಯತಾಂ ತೇನ ಪರಮಾತ್ಮಾ ರಮಾಪತಿಃ ॥ ೮ ॥
ನಮೋನಮೋಽಶೇಷದೋಷ ದೂರ ಪೂರ್ಣಗುಣಾತ್ಮನೇ ।
ವಿರಿಂಚಿ(ಚ)ಶರ್ವ ಪೂರ್ವೇಡ್ಯ ವಂದ್ಯಾಯ ಶ್ರೀವರಾಯತೇ ॥ ೯ ॥

ಇಲ್ಲಿ ಈ ಪಾದದ ಕೆಲವು ಅಧಿಕರಣಗಳ ತಾತ್ಪರ್ಯವನ್ನು "ಯಥಾಸಂಕಲ್ಪ ಭೋಗಾಂಶ್ಚ" ಇತ್ಯಾದಿ ಶಬ್ದಗಳಿಂದ ತಿಳಿಸಿದ್ದಾರೆ.

"ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ" ಹಾಗೂ "ಓಂ ಸಂಕಲ್ಪಾದೇವ ಚ ತತ್ ಶ್ರುತೇಃ ಓಂ" ಈ ಅಧಿಕರಣಗಳ ತಾತ್ಪರ್ಯವನ್ನು "ಯಥಾ" ಎಂಬುದಾಗಿ ಸಂಗ್ರಹಿಸಿದ್ದಾರೆ ವಿಷ್ಣುವನ್ನು ಹೊಂದಿ ಇರುವ ಮುಕ್ತರು ವಿಷ್ಣುವಿನ ಇಚ್ಛಾನುಸಾರಿಯಾದ ಭೋಗಗಳನ್ನು ಹೊಂದುತ್ತಾರೆ

ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ" ಇದರ ತಾತ್ಪರ್ಯವನ್ನು ಚಿದಾನಂದ' ಪದದಿಂದ ಸಂಗ್ರಹಿಸಿದ್ದಾರೆ ಚಿದಾನಂದ ಶರೀರವುಳ್ಳವರು ಎಂದರ್ಥವು ಏವ ಶಬ್ದದಿಂದ ಅಪ್ರಾಕೃತ ಶರೀರವುಳ್ಳವರೆಂದು ತಿಳಿಯಬೇಕು

ಓಂ ಜಗದ್ವ್ಯಾಪಾರವರ್ಜಮ್ ಓಂ' ಈ ಅಧಿಕರಣಾರ್ಥವನ್ನು "ಜಗತ್ ಸೃಷ್ಟ್ಯಾದಿ' ಪದದಿಂದ ಸಂಗ್ರಹಿಸಿದ್ದಾರೆ ಜಗತ್ತಿನ ಮುಕ್ತವರ್ಗದ ಸೃಷ್ಟಿ ಸ್ಥಿತ್ಯಾದಿ ಕರ್ತೃತ್ವ ವಿಷಯಗಳಲ್ಲಿ ಸಾಮರ್ಥ್ಯವನ್ನು ಬಿಟ್ಟು ಮುಕ್ತರಾದ ತಮಗಿಂತ ಕಡಿಮೆಯವರಾದ (ಅವರರಾದ) ಜೀವರನ್ನು ನಿಯಮಿಸುವುದೇ ಮೊದಲಾದ ಶಕ್ತಿಯನ್ನು ಹೊಂದಿರುತ್ತಾರೆ

ಓಂ ಅತ ಏವ ಚಾನನ್ಯಾಧಿಪತಿಃ ಓಂ' ಈ ಅಧಿಕರಣಾರ್ಥವನ್ನು ಏನಾ ಶಬ್ದದಿಂದ ಸಂಗ್ರಹಿಸಿದ್ದಾರೆ ಮುಕ್ತರು ಸ್ವಭಾವತ ತಮಗಿಂತ ಉತ್ತಮರಾದ ವಿಷ್ಣು, ದೇವತ, ಗುರುಗಳನ್ನು ಬಿಟ್ಟು ಇತರರ ವಶರಾಗುವದಿಲ್ಲ ತಮ್ಮ ಸಮಾನರಾದವರ ಅಧೀನರೂ ಆಗುವದಿಲ್ಲ ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ' ಈ ಅಧಿಕರಣದ ತಾತ್ಪರ್ಯವನ್ನು ವೃದ್ಧಿಹ್ರಾಸ ಇತ್ಯಾದಿ ಪದಗಳಿಂದ ಸಂಗ್ರಹಿಸಿದ್ದಾರೆ ವಿಷಯ ಭೋಗಗಳನ್ನು ಮಾಡಿದರೂ ಕೂಡ ಅವರು ಚಿಂತಾ ದುಃಖ ಆಲಸ್ಯಾದಿ ದೋಷರಹಿತರಾಗಿರುತ್ತಾರೆ ವೃದ್ಧಿಹ್ರಾಸಾದಿಗಳಿಲ್ಲದೇ ಏಕಪ್ರಕಾರವಾದ ಆನಂದವುಳ್ಳವರೆಂದರ್ಥವು

ಓಂ ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್ ಓಂ' ಈ ಅಧಿಕರಣದ ಫಲಿತಾರ್ಥವನ್ನು "ಮೋದಂತ" ಎಂಬುದಾಗಿ ತಿಳಿಸಿದ್ದಾರೆ ಮುಕ್ತರಾದವರು ಪುನರಾವೃತ್ತಿರಹಿತರಾಗಿ ಸುಖವನ್ನು ಅನುಭವಿಸುತ್ತಾರೆ 'ಅವಿರತಂ' ಎಂಬುದನ್ನು ಕ್ರಿಯಾವಿಶೇಷಣವಾಗಿಟ್ಟುಕೊಂಡಾಗ ದುಃಖರಹಿತವಾದ ಅಪರಿಮಿತವಾದ ಆನಂದವನ್ನು ಅನುಭವಿಸುತ್ತಾರೆ ಎಂದರ್ಥವು

ಶ್ರೀಮಧ್ವಾಚಾರ್ಯರು ತಮ್ಮ ಸ್ವರೂಪವನ್ನು ಸೂಚಿಸುತ್ತ ತಮ್ಮಿಂದ ರಚಿತವಾದ ಅಣುಭಾಷ್ಯದಿಂದ ಭಗವಂತನ ಪ್ರೀತಿರೂಪವಾದ ಮಂಗಲವನ್ನು ಆಶಿಸಿ "ಪೂರ್ಣಪ್ರಜ್ಞ" ಇತ್ಯಾದಿ ಪದಗಳಿಂದ ಹೇಳುತ್ತಾರೆ ಈಶಾದನ್ಯತ್ರ ಆಲೋಚನೇ ಸರ್ವವಿಷಯಕ ಜ್ಞಾನಂ ಋಜುಯೋಗಿ ಜ್ಞಾನಮ್" ಎಂಬಂತೆ ಭಗವಂತನನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಆಲೋಚನಯಿಂದ ಎಲ್ಲ ವಿಷಯಗಳ ಜ್ಞಾನವನ್ನು

ಹೊಂದುವ ವಿಪ್ರಲಂಭಾದಿ ದೋಷರಹಿತರಾದ ಜ್ಞಾನಪೂರ್ಣರಾದ "ಪೂರ್ಣಪ್ರಜ್ಞ ರಿಂದ ಇದು ರಚಿತವಾಗಿದ ಇದು ಇವರ ಋಜುತ್ವ'ವನ್ನು ಸೂಚಿಸುತ್ತದೆ

ಎಲ್ಲ ಪ್ರಮೇಯಗಳನ್ನೊಳಗೊಂಡ ಎಲ್ಲ ಮೀಮಾಂಸಾಶಾಸ್ತ್ರದ ಅರ್ಥ ಸಂಗ್ರಹರೂಪವಾದ ಅಣುಭಾಷ್ಯವೆಂಬ ಗ್ರಂಥವು ಮಾಡಲ್ಪಟ್ಟಿದೆ ಈ ಗ್ರಂಥ ರಚನೆಯಿಂದ ಲಕ್ಷ್ಮೀಪತಿಯಾದ ಎಲ್ಲರಿಗೂ ಸ್ವಾಮಿಯಾದ ಪರಮಾತ್ಮನಾದ ಶ್ರೀ ವಿಷ್ಣುವು ಪ್ರೀತನಾಗಲಿ

ಸರ್ವಜ್ಞ ಚೂಡಾಮಣಿಗಳಾದ ಆಚಾರ್ಯಶ್ರೇಷ್ಠರಾದ ಶ್ರೀಮನ್‌ಮಧ್ವಾಚಾರ್ಯರು ಕೊನೆಯಲ್ಲಿ ಕೂಡ ಶಿಷ್ಯ ಶಿಕ್ಷಣಾರ್ಥವಾಗಿ ಶಾಸ್ತ್ರೋಕ್ತಗುಣಗಳಿಂದ ಕೂಡಿದ ಶ್ರೀಲಕ್ಷ್ಮೀಪತಿಯನ್ನು ಪುನಃಪುನಃ ನಮಸ್ಕರಿಸುತ್ತಾರೆ 'ನಮೋ ನಮೋ" ಎಂಬುದಾಗಿ ಅಶೇಷ ದೋಷದೂರನಾದ ಗುಣಪರಿಪೂರ್ಣನಾದ, ಬ್ರಹ್ಮರುದ್ರರೇ ಮೊದಲಾದ ಎಲ್ಲ ದೇವತೆಗಳಿಂದ ಸ್ತುತ್ಯನಾದ, ವಂದ್ಯನಾದ ಶ್ರೀಲಕ್ಷ್ಮೀದೇವಿಯರಿಗಿಂತ ಉತ್ತಮನಾದ ನಿನಗೆ ಅನಂತಾನಂತ ನಮಸ್ಕಾರಗಳು

ನಿರ್ದೋಷತ್ವಾದಿಗುಣ ವಿಶಿಷ್ಟನಾದ ಶ್ರೀವಿಷ್ಣುವು ಮೀಮಾಂಸಾ ಶಾಸ್ತ್ರ ಪ್ರತಿಪಾದ್ಯನಾಗಿದ್ದಾನೆ ಇದರಿಂದ ಅಶೇಷ ಮಂಗಲವನ್ನು ಸೂಚಿಸುತ್ತಾರ

ಯಾದವಾಚಾರ್ಯರ ಹೃದಯಕಮಲದಲ್ಲಿ ಇರುವ, ಶ್ರೀಮಧ್ವಾಚಾರ್ಯರ ಹೃದಯದಲ್ಲಿ ವಾಸಿಸುವ ಗುಣಪೂರ್ಣನಾದ, ದೋಷದೂರನಾದ, ಸಜ್ಜನರಿಂದ ತಿಳಿಯಲು ಯೋಗ್ಯನಾದ, ಹೊಂದಲು ಯೋಗ್ಯನಾದ ಶ್ರೀಹರಿಯನ್ನು ನಮಸ್ಕರಿಸುತ್ತೇವೆ

ಗುರುಗಳಾದ ಶ್ರೀಯಾದವಾಚಾರ್ಯರೆಂಬ ಅಭಿದಾನವುಳ್ಳ ಅವರ ಕೃಪಾಬಲದಿಂದ ಶ್ರೀನಿವಾಸನೆಂಬ ಹೆಸರುಳ್ಳ ನನ್ನಿಂದ ಅಣುಭಾಷ್ಯವೆಂಬ ಗ್ರಂಥದ ವಿವರಣೆಯು ಕಿಂಚಿತ್ತಾಗಿ ಮಾಡಲ್ಪಟ್ಟಿತು ಇದರಿಂದ ನನ್ನಲ್ಲಿ ಸುಪ್ರೀತನಾದ ಸರ್ವಜ್ಞಾಚಾರ್ಯರಿಂದ ಉಪಾಸ್ಯನಾದ ಬಾದರಾಯಣರೂಪಿಯಾದ ಶ್ರೀಹರಿಯು ಫಲವನ್ನು ಗುರುಗಳಿಗೆ ಕೊಡಲಿ

ಶ್ರೀಯದುಪತ್ಯಾಚಾರ್ಯ ಪೂಜ್ಯವಾದ ಆರಾಧಕರಾದ ಶ್ರೀನಿವಾಸತೀರ್ಥರಿಂದ ವಿರಚಿತವಾದ ಅಣುಭಾಷ್ಯ ವಿವರಣೆಯಲ್ಲಿ ಚತುರ್ಥ ಅಧ್ಯಾಯದ ಚತುರ್ಥ ಪಾದವು ಮುಗಿದುದು

**ಶ್ರೀಮಧ್ವೇಶಾರ್ಪಣಮಸ್ತು**



# ಇದೇ ಲೇಖಕರ ಪ್ರಕಟಿತ ಕೃತಿಗಳು

| | | |
|---|---|---|
| 1. | ಶ್ರೀ ಮಜ್ಞಯತೀರ್ಥ ಸುಪ್ರಭಾತ | 00=60 |
| 2. | ಶ್ರೀ ಸಪ್ತರ್ಷಿರಾಮಾಯಣ ಹಾಗೂ ಶ್ರೀ ರಾಮ ವೇದವಾದ ಸ್ತೋತ್ರ. (ತೃತೀಯ ಮುದ್ರಣ) | 5=00 |
| 3. | ದಾಸ ಸಾಹಿತ್ಯ ಸೌರಭ (ಸಂಪುಟ-1) | 18=00 |
| 4. | ಉಪನೀತರಿಗೆ ಉಪಯುಕ್ತ ಉಪದೇಶ | 20=00 |
| 5. | ಶ್ರೀ ಸಂಧ್ಯಾಸಾರ ಸಂಗ್ರಹ | 10=00 |
| 6. | ಶ್ರೀ ರುಕ್ಮಿಣೀಶ ವಿಜಯ ಸಾರಸಂಗ್ರಹ | 20=00 |
| 7. | ಶ್ರೀ ದೇವಪೂಜಾ ಸಾರಸಂಗ್ರಹ (ದ್ವಿತೀಯ ಮುದ್ರಣ) | 20=00 |
| 8. | ಸದಾಚಾರ ಸೌರಭ (ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಉಜಿರೆ ಅವರಿಂದ ಪ್ರಕಟಿತ) | 25=00 |
| 9. | ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರಮ್ (ಕನ್ನಡ ಅನುವಾದ) (ಶ್ರೀ ಶ್ರೀ ಸತ್ಯಸಂಧತೀರ್ಥರ ಭಾಷ್ಯಾನುಸಾರಿ)(ದ್ವಿತೀಯ ಮುದ್ರಣ) | 25=00 |
| 10. | ಶ್ರೀ ವೈಶ್ವದೇವಸಾರ ಸಂಗ್ರಹ (ದೇವಪೂಜಾ, ವೈಶ್ವದೇವ, ಬಲಿಹರಣ. ಬ್ರಹ್ಮಯಜ್ಞ ಹಾಗೂ ಭೋಜನ ಕ್ರಮ ಸಹಿತ) | 20=00 |
| 11. | ದಾಸ ಸಾಹಿತ್ಯ ಸೌರಭ (ಸಂಪುಟ-2) | 25-00 |
| 12. | ಶ್ರೀಕೃಷ್ಣಾವತಾರ ಸಂದೇಶ | 25-00 |
| 13. | ಶ್ರೀ ಅಣುಭಾಷ್ಯ ಸಾರಸಂಗ್ರಹ | 20-00 |

## ಮುಂಬರುವ ಕೃತಿಗಳು

1. ದಶಾವತಾರ ಸ್ತೋತ್ರ ಮಂಜರಿ
2. ವೇದ ಬ್ರಹ್ಮಸೂತ್ರಗಳು ಇತ್ಯಾದಿ (ಪರಿಚಯಾತ್ಮಕ)
3. ಗಜೇಂದ್ರಮೋಕ್ಷ (ವಿಮರ್ಶಾತ್ಮಕ ಅಧ್ಯಯನ)

---

**ಸೂಚನೆ :** ನಂ. 1, 4. 5. 6 ಹಾಗೂ 7 ಈ ಪ್ರಕಟಿತ ಕೃತಿಗಳು ಲಭ್ಯವಿಲ್ಲ.